## ಪ್ರಮೇಯ:

## ಅಪ್ಪಟವಾದ ಪಾರ್ಲೆ ಕ್ರ್ಯಾಕ್‌ಜಾಕ್ ಬಿಸ್ಕಿಟನ್ನು ಗುರುತಿಸುವುದು ಸರಿಯಾದ ಚಚ್ಚೌಕವನ್ನು ಮಾಡುವುದಕ್ಕಿಂತ ಸುಲಭ



ಪಾರ್ಲೆ ಗ್ಲುಕೋ ಪಾರ್ಲೆ ಮೊನಕೊ ಪಾರ್ಲೆ ಕ್ರ್ಯಾಕ್‌ಜಾಕ್

**ಪಕ್ಷ: ಗರಿಮುರಿ, ತಾಜಾ ಹಾಗೂ ಜನಪ್ರಿಯವಾಗಿರುವುದರಿಂದ ಪಾರ್ಲೆ ಬಿಸ್ಕಿಟ್‌ಗಳನ್ನು ನಕಲು ಮಾಡುವವರು ಅನೇಕರಿದ್ದಾರೆ.**

ಸಾಧ್ಯ : ಒಂದು ಬಿಸ್ಕಿಟನ್ನು ಪಾರ್ಲೆ ಬಿಸ್ಕಿಟನಂತೆ
ಕಾಣುವ ಹಾಗೆ ಮಾಡಬಹುದು,
ಆದರೆ ಅದಕ್ಕೆ ಪಾರ್ಲೆ ಬಿಸ್ಕಿಟನ ರುಚಿಯನ್ನು
ಕೊಡಲು ಸಾಧ್ಯವಿಲ್ಲ.

ಸಿದ್ಧತೆ : ಅ) ಕೊಂಡುಕೊಳ್ಳುವ ಪರೀಕ್ಷೆ :
ನೆನಪಿನಲ್ಲಿಟ್ಟುಕೊಳ್ಳತಕ್ಕ ಮೊದಲನೆಯ
ಸಂಗತಿ :
ಪಾರ್ಲೆ ಕ್ರ್ಯಾಕ್‌ಜಾಕ್ ಬಿಸ್ಕಿಟ್‌ಗಳು
ಬಿಡಿಯಾಗಿ ಎಂದೂ ಮಾರಲ್ಪಡುವುದಿಲ್ಲ.
ಅವು ವರ್ಣರಂಜಿತ ಫಾಯ್ಲ್ ಪ್ಯಾಕ್‌ಗಳಲ್ಲಿ
ಆರೋಗ್ಯಸೂತ್ರಗಳಿಗನುಸಾರವಾಗಿ ಸೀಲ್
ಮಾಡಲ್ಪಟ್ಟು ದೊರೆಯುತ್ತವೆ—ಅವುಗಳ
ಅನುಪಮ ತಾಜಾತನವನ್ನು
ಉಳಿಸಿಡುವುದಕ್ಕಾಗಿ.

ಆ) ಪ್ಯಾಕೇಜ್ ಪರೀಕ್ಷೆ :
ಯಾವುದೇ ಶೆಲ್ಫ್‌ನಲ್ಲಿ ಇಟ್ಟಿರುವ,
ಆಕರ್ಷಕವಾದ ಪಾರ್ಲೆ ಕ್ರ್ಯಾಕ್‌ಜಾಕ್
ಬಿಸ್ಕಿಟ್ ಪ್ಯಾಕ್‌ನ್ನು ಗುರುತಿಸುವುದು ಸುಲಭ.
ಇಮ್ಮಡಿ ಖಾತ್ರಿ ಮಾಡಿಕೊಳ್ಳುವುದಕ್ಕಾಗಿ
ಪ್ಯಾಕ್‌ನ ಮೇಲಿರುವ P-A-R-L-E (ಪಾರ್ಲೆ)
ಹೆಸರನ್ನು ಪರೀಕ್ಷಿಸಿರಿ.




ಇ) ರುಚಿಯ ಪರೀಕ್ಷೆ :
ಬಿಸ್ಕಿಟನ್ನು ತಿಂದುನೋಡಿರಿ. ಅದು, ಪಾರ್ಲೆ
ಕ್ರ್ಯಾಕ್‌ಜಾಕ್‌ನ ವಿಷಯದಲ್ಲಿ ನಿಮಗೆ ಸದಾ
ತಿಳಿದಿರುವಂತೆ, ಅಷ್ಟೇ ಗರಿಮುರಿಯಾಗಿ,
ತಾಜಾ ಆಗಿ ಇದೆಯೆ ?

ಇತಿ ಸಿದ್ಧಂ:

**ಒಂದಕ್ಕಿಂತ ಒಂದು ರುಚಿಕರ, ಸಂತೃಪ್ತಿಯ ಶಿಖರ.**

everest/79/PP/452-kn




# ಚಂದಮಾಮ

ಸಂಸ್ಥಾಪಕರು : 'ಚಕ್ರಪಾಣಿ'

ಸಂಚಾಲಕರು : ನಾಗಿರೆಡ್ಡಿ

---

ಉನ್ನತ ಪದವಿಗಳಲ್ಲಿರುವವರಿಗೆ ಪ್ರತ್ಯೇಕ ರೀತಿಯಲ್ಲಿ ಹಣ ಸಂಪಾದಿಸಿಕೊಳ್ಳುವ ಸಂದರ್ಭಗಳು ಹೆಚ್ಚಾಗಿರುವುದು ಎಲ್ಲಾ ವ್ಯವಹಾರಗಳಲ್ಲಿಯೂ ಕಂಡು ಬರುತ್ತವೆ. ಅಂಥವರು ಬೇಕೆಂದು ಹಣಕ್ಕೆ ಕೈನೀಡದಿದ್ದರೂ ಲಂಚ ಕೋರರೆಂಬ ಹೆಸರಿಗೆ ಆಳಾಗುತ್ತಾರೆ. ಅದೃಷ್ಟವಿದ್ದಷ್ಟು ಕಾಲ ಒಳ್ಳೆಯದಾಗಿ ನಡೆದರೂ ಒಂದು ದಿನ ಅವರ ಹೆಸರಿಗೆ ಕಳಂಕ ಬಾರದಿರದೆಂಬ ಭಯವು ಈ ಸಂಚಿಕೆಯ "ರುಜುವಾಗದುದು" ಎಂಬ ಬೇತಾಳ ಕಥೆಯಲ್ಲಿ ಬರುತ್ತದೆ. ಏನೋ ಎರಡು ಮೂರು ಬಾರಿ ಅದೃಷ್ಟವು ಕಾಪಾಡಿದರೂ ಅದರ ಬುದ್ಧಿ ಚಂಚಲವೆಂಬುದನ್ನು ಮರೆಯಬಾರದು.

## ಅಮರವಾಣಿ

ದುರ್ಜನೈಸ್ಸಹ ಸಂಪರ್ಕಃ ಶತ್ರುತಾಟ ನ ಯುಜ್ಯತೇ
ಗೃಹೀತೇ ದಹ್ಯತೇಂಗಾರೇ ಶಾಂತೇ ಕೃಷ್ಣಾಯತೇ ಕರಃ

ದುರ್ಜನರೊಂದಿಗೆ ಸ್ನೇಹವೂ ವೈರವೂ ಒಳ್ಳೆಯದಲ್ಲವಾದುವೇ. ಕೆಂಡವನ್ನು ಹಿಡಿದರೆ ಕೈ ಸುಡುತ್ತದೆ; ತಣ್ಣಗಾದರೂ ಕೈ ಕಪ್ಪಾಗುತ್ತದೆ.

---

ಸಂಪುಟ: ೬೪ ಫೆಬ್ರವರಿ '೮೦ ಸಂಚಿಕೆ: ೨

---

ಬಿಡಿ ಪ್ರತಿ ರೂ. ೧-೫೦ : : ವಾರ್ಷಿಕ ಚಂದಾ ರೂ. ೧೮-೦೦




**ಕೆ. ಎನ್. ಆರ್. ಆಂಜನೇಯುಲು, ಗುಡಿವಾಡ**

ಪ್ರ: ಶಿವನ ತಲೆಯಲ್ಲಿ ಯಾವಾಗಲೂ ಅರ್ಧ ಚಂದ್ರನೇ ಇರುವುದೇಕೆ? ಪೂರ್ತಿ ಚಂದ್ರ ಏಕೆ ಇರುವುದಿಲ್ಲ ?

ಉ; ಶಿವನ ತಲೆಯಲ್ಲಿರುವುದು ಅರ್ಧ ಚಂದ್ರ ಕೂಡಾ ಅಲ್ಲ. ಚೌತಿ ಚಂದ್ರ. ಚೌತಿ ಚಂದ್ರವು ವಿನಾಯಕನಿಗೆ ಸಂಕೇತ. ಶಿವನಿಗೂ, ವಿನಾಯಕನಿಗೂ ನಾವು ಗುರುತಿಸುವ ಸಂಬಂಧವು ಹಾಗಿರಲಿ; ಏಕೆಂದರೆ ಶಿವನಲ್ಲಿರುವ ಹಾವು, ಗಂಗೆ, ವಿನಾಯಕ ಮೊದಲಾದುವೆಲ್ಲಾ ಮಾನವರ ಮೊತ್ತ ಮೊದಲನೇ ಆರಾಧ್ಯ ದೈವಗಳೇ. ಶಿವನಲ್ಲಿ ಅರ್ಧ ಭಾಗವಾಗಿರುವ ಪಾರ್ವತಿಯೂ, ಶಿವನ ವಾಹನವಾದ ಎತ್ತೂ, ಒಂದು ಕಾಲದಲ್ಲಿ ಶಿವನ ಸಂಬಂಧವಿಲ್ಲದೆ ಪೂಜಿಸಲ್ಪಟ್ಟವುಗಳೇ. ಈಗ ಆ ಶಿವನಲ್ಲಿ ಪ್ರತ್ಯ ಪ್ರತ್ಯೇಕ ವಾಗಿದ್ದ ದೇವತಾಭಾವನೆಗಳೆಲ್ಲವನ್ನೂ ಸೇರಿಸಿ ಪೂಜಿಸಲಾಗುತ್ತಿದೆ.

**ಅಡಪಾಲ ಗೋಪಾಲರೆಡ್ಡಿ, ಮುಹಮ್ಮದಾಪುರಂ**

ಪ್ರ: ದಕ್ಷಿಣಾರ್ಧ ಗೋಳದಲ್ಲಿರುವವರಿಗೆ ಧ್ರುವ ನಕ್ಷತ್ರವು ಕಾಣುತ್ತದೆಯೆ ? ಕಾಣದಿದ್ದರೆ ಅವರಿಗೆ ರಾತ್ರಿಯ ಹೊತ್ತಿನಲ್ಲಿ ದಿಕ್ಕು ತಿಳಿದುಕೊಳ್ಳಲು ಪ್ರಕೃತಿಸಿದ್ಧವಾದ ಆಧಾರಯಾವುದು ?

ಉ: ಭೂಮಧ್ಯರೇಖೆಗೆ ದಕ್ಷಿಣದಲ್ಲಿರುವ ಪ್ರಾಂತಗಳಲ್ಲಿ ಧ್ರುವ ನಕ್ಷತ್ರ ಕಾಣುವುದಿಲ್ಲ. ದಕ್ಷಿಣಾಕಾಶದಲ್ಲಿ "ಧ್ರುವ" ನಕ್ಷತ್ರವಿಲ್ಲದೆ ಹೋದರೂ, ದಕ್ಷಿಣ ದಿಕ್ಕನ್ನು ಸೂಚಿಸುವ ಕಾಂತಿಯುತ ನಕ್ಷತ್ರಗಳು ಅನೇಕವಿವೆ. ಅವುಗಳ ಸಹಾಯದಿಂದ ಆ ಪ್ರಾಂತದವರು ನಮ್ಮ ಧ್ರುವ ನಕ್ಷತ್ರದ ಪ್ರಯೋಜನವನ್ನೇ ಪಡೆಯುತ್ತಾರೆ.

**ಜಿ. ವೀರಭದ್ರರಾವ್, ರಾಜಮಂಡ್ರಿ**

ಪ್ರ: ಐಂದ್ರಜಾಲಿಕರು ತೋರಿಸುವ ಪ್ರದರ್ಶನವೆಲ್ಲಾ ದೊಡ್ಡ ಸುಳ್ಳೆಂದು ತಿಳಿದು ಕೂಡಾ ಅವರು ತೋರಿಸುವುದೆಲ್ಲ ನಿಜವೆಂದು ನಂಬಿ ಭ್ರಮಿಸಲು ಕಾರಣವೇನೆನ್ನುವಿರಿ ?

ಉ; ಐಂದ್ರಜಾಲಿಕರ ಪ್ರದರ್ಶನದಲ್ಲಿರುವ ದೊಡ್ಡ ಆಕರ್ಷಣೆ ನಿಜದಂತೆ ತೋರಿಸುವ ಸುಳ್ಳೇ ಆಗಿದೆ. ಸಿನಿಮಾ ನಾಟಕಗಳು ನಿಜವಲ್ಲವೆಂದು ಗೊತ್ತಿದ್ದು ಕೂಡಾ ನಾವು ನೋಡುವುದಿಲ್ಲವೇ ?

**ಜೊನ್ನಲಗಡ್ಡ ರಾಜಕುಮಾರಿ, ಭುವನೇಶ್ವರ್**

ಪ್ರ: ನಾಗರ ಹಾವನ್ನು ಮತ್ತೊಂದು ನಾಗರ ಹಾವು ಕಡಿದರೆ ಅದು ಸಾಯುತ್ತದೆಯೆ ?

ಉ: ಈ ಪ್ರಶ್ನೆ ತಪ್ಪು. ಒಂದು ನಾಗರ ಹಾವಿನ ವಿಷ ಇನ್ನೊಂದು ನಾಗರ ಹಾವನ್ನು ಬಾಧಿಸುತ್ತದೆಯೇ ಎಂದಿರ ಬೇಕು. ಬಾಧಿಸುತ್ತದೆ. (ಈ ಉತ್ತರ ಬರೆದವರು : ಹಾರೀ ಮಿಲ್ಲರ್, F. Z. S. ಮದ್ರಾಸು)




## ೭೯

ಹಗೆತೀರಿಸಿಕೊಂಡು ಶಾಂತವಾದ ಕೋತಿಯ ಕಥೆಯನ್ನು ಕೇಳಿ ಅತ್ಯಂತ ಲೋಭಿ ಹೀಗೆಂದನು:

"ನಿನ್ನ ಮಾತು ನಿಜವೇ. ದುರಾಶೆಯು ಪಾಪಕ್ಕೆ ಸಿಕ್ಕಿಕೊಂಡ ಮನುಷ್ಯರು ಕಷ್ಟಗಳಿಗೆ ಸಿಕ್ಕಿ ಬೀಳುತ್ತಾರೆ. ಅಥವಾ ಅವಹೇಳನೆಯ ಪಾಲಿಗೆ ಬೀಳುತ್ತಾರೆ. ಆದರೆ ಈ ಸಂಗತಿ ಪೂರ್ತಿ ಮೀರಿ ಹೋಗುವ ಮೊದಲು ಅವರಿಗೆ ಗೊತ್ತಾಗುವುದೇ ಇಲ್ಲ. ನನಗೆ ಹಾಗೆ ತಾನೇ ಆಯಿತು ?" ಎಂದನು.

"ಹಾಗನ್ನ ಬೇಡ ಮಿತ್ರಾ! ನಾನು ನಿನಗೆ ಮೊದಲೇ ಹೇಳಿ ಎಚ್ಚರಿಸಿದ್ದೆನಷ್ಟೆ? ಆದರೂ ನೀನು ನಿನ್ನ ಪಾಡಿಗೆ ಗಾಯನ ಮಾಡಿದ ಕತ್ತೆಯ ಹಾಗೆ ನನ್ನ ಮಾತನ್ನು ಒಂದಿಷ್ಟೂ ಲಕ್ಷ್ಯಮಾಡದೆ ಬೇಕಂತ ಬಂದು ಈ ಕಷ್ಟದಲ್ಲಿ ಸಿಕ್ಕಿಕೊಂಡಿರುವಿ. ಆ ಕತ್ತೆಯ ಕಥೆಯನ್ನು ಕೇಳು" ಎಂದು ಅತಿ ಲೋಭಿ ಆ ಕಥೆಯನ್ನು ಹೇಳಿದನು:

ಒಂದು ಕಾಲದಲ್ಲಿ ಉದ್ಧತವೆಂಬ ಒಂದು ಕತ್ತೆ ಇದ್ದಿತು. ಅದು ಹಗಲು ತನ್ನ ಯಜಮಾನನಾದ ಅಗಸನ ಬಟ್ಟೆಗಳನ್ನು ಹೊತ್ತು, ರಾತ್ರಿಯಲ್ಲಿ ಸ್ವೇಚ್ಛೆಯಾಗಿ ತಿರುಗಾಡಿಕೊಂಡಿತ್ತು. ಹಾಗೆ ಹೊಲಗದ್ದೆಗಳಲ್ಲಿ ತಿರುಗುತ್ತಿರುವಾಗ ಅದಕ್ಕೆ ಒಂದು ನರಿಯೊಂದಿಗೆ ಸ್ನೇಹವಾಯಿತು. ಅವೆರಡೂ ಜತೆಯಾಗಿಯೇ ತಿರುಗುತ್ತಿದ್ದುವು. ಒಂದು ದಿನ ರಾತ್ರಿ ನರಿಯೂ ಕತ್ತೆಯೂ ಸೌತೇ ಹೊಲವನ್ನು ಪ್ರವೇಶಿಸಿ ರಾತ್ರಿ ಪೂರಾ ಸೌತೇಕಾಯಿತಿಂದು ಹೊಟ್ಟೇ ತುಂಬಿದ ಆನಂದದಲ್ಲಿ ಕುಣಿದಾಡಿದುವು. ಬೆಳಗಾಗಲಿಕ್ಕೆ ಇನ್ನೂ ಸ್ವಲ್ಪ ಹೊತ್ತಿದ್ದಿತು. ಚಂದ್ರಪ್ರಕಾಶ ಚೆನ್ನಾಗಿತ್ತು. ಆಗ ಕತ್ತೆ "ನರಿ ಬಾವಾ, ಬೆಳುದಿಂಗಳು ಎಷ್ಟು ಉತ್ಸಾಹ ಕೊಡುತ್ತಿದೆ ನೋಡಿದಿಯಾ ? ಈಗ ಹಾಡಿದರೆ ತುಂಬಾ ಚೆನ್ನಾಗಿರುತ್ತೆ. ನಿನಗೆ ಇಷ್ಟವಾದ ಯಾವ ರಾಗ ಹಾಡಬೇಕೆಂದು ಹೇಳು. ಅದನ್ನೇ ಹಾಡುತ್ತೇನೆ." ಎಂದಿತು.

"ಕತ್ತೆ ಬಾವಾ, ನಾವು ಮಾಡುವುದು ಇಲ್ಲಿ ಕಳ್ಳ ಕೆಲಸ, ಈ ಸ್ಥಳದಲ್ಲಿ ಇಂತಹ ವಿಷಯಗಳನ್ನು ಚರ್ಚಿಸಿ ಏನು ಉಪಯೋಗ? ಜಾರರೂ ಚೋರರೂ ಯಾವಾಗಲೂ ರಹಸ್ಯವಾಗಿಯೇ ವ್ಯವಹಾರ ನಡೆಸಬೇಕು. ಶ್ವಾಸಕೋಶದ ರೋಗವುಳ್ಳವರು, ಬೇಗನೇ



ಗುತ್ತದೆ. ಅಪ್ಸರ ಮಧ್ಯದಲ್ಲಿದ್ದು ಶ್ರವಣಾನಂದ ದಾಯಕವಾದ ಸಂಗೀತ ಕೇಳುವವನು ಚರಿತಾರ್ಥ ನಾಗುತ್ತಾನಂತೆ. ಈ ಸಣ್ಣ ವಿಷಯ ಕೂಡಾ ನಿನಗೆ ತಿಳಿಯದು" ಎಂದಿತು.

"ಬಾವಾ, ನಿನ್ನ ಮಾತು ನಿಜವಾಗಿರಬಹು ದಾದರೂ, ನಿನಗೆ ಸಂಗೀತವೇ ಬಾರದಲ್ಲಾ? ಕರ್ಣ ಕಠೋರವಾಗಿ ಓಂಡ್ರಿಸಲಿಕ್ಕಷ್ಟೇ ನಿನಗೆ ಗೊತ್ತು. ಇದ್ದದ್ದು ಹೇಳಿದೆ ಅಂತ ಸಿಟ್ಟಾಗಬೇಡ. ನಮ್ಮ ಕೆಲಸ ಹಾಳಾಗುವಂಥ ಬೇಡದ ಕೆಲಸ ಏಕೆ ಮಾಡಬೇಕು?" ಎಂದಿತು ನರಿ.

"ಛೀ ಮೂರ್ಖ! ನನಗೆ ಹಾಡಲು ಬರುವುದಿಲ್ಲ ವೆಂದು ಯಾರು ಹೇಳಿದರು? ಸಂಗೀತದ ವಿವರ ಹೇಳುತ್ತೇನೆ ಕೇಳು. ಸ್ವರಗಳು ಏಳು; ಸ್ಥಾಯಿಗಳು ಮೂರು; ಮೂರ್ಛನೆ ಇಪ್ಪತ್ತೊಂದು; ರಾಗಗಳು ಮೂವತ್ತಾರು; ಭಾವಗಳು ನಲುವತ್ತು. ಭರತನು ಬರೆದ ಸಂಗೀತ ಶಾಸ್ತ್ರದಲ್ಲಿ ನೂರೆಂಬತ್ತೈದು ಅಧ್ಯಾಯ ಗಳಿವೆ. ಆತನ ಸಿದ್ಧಾಂತದಂತೆ ವೇದಗಳ ಹೊರತು ಸಂಗೀತವನ್ನು ಮೀರಿಸುವ ವಿದ್ಯೆ ಇಲ್ಲ. ತನ್ನ ಸ್ನಾಯುಗಳನ್ನು ಒಣಗಿಸಿ, ತಂತಿಗಳಾಗಿ ಮಾಡಿ ಅದರಿಂದ ಸಂಗೀತ ಹುಟ್ಟಿಸಿ, ರಾವಣನು ಶಿವನನ್ನು ಸಂಪ್ರೀತ ಗೊಳಿಸಿದ್ದಾನೆ. ಆದುದರಿಂದ, ನರಿ ಬಾವಾ! ನನಗೆ ಸಂಗೀತದ ಸಂಗತಿ ತಿಳಿಯದೆಂದು ಹೇಗೆ ಹೇಳುವಿ? ಹಾಡಬೇಡವೆಂದು ಏಕೆ ನಿರುತ್ಸಾಹ ಪಡಿಸುವಿ? ಹಾಡಿಯೇ ತೀರುತ್ತೇನೆ. ನೀನು ಕೇಳ ದಿದ್ದರೆ ಅಷ್ಟೇ ಹೋಯಿತು." ಎಂದಿತು ಕತ್ತೆ.

"ಕತ್ತೆಬಾವಾ! ನೀನು ಹಾಡಿಯೇ ತೀರುವು ದೆಂದು ಹಟಹಿಡಿದರೆ, ನಾನು ಬೇಲಿಯ ಬಾಗಿಲ ಹತ್ತಿರ ಹೋಗಿ ಯಾರಾದರೂ ಬರುತ್ತಾರೇನೋ ಅಂತ ನೋಡುತ್ತೇನೆ. ಆಮೇಲೆ ನೀನು ಚಿತ್ತಬಂದ ಹಾಗೆ ಗಾನಮಾಡು" ಎಂದು ಹೇಳಿ ನರಿ ಅಲ್ಲಿಂದ ಹೊರಟು ಅತ್ತಕಡೆ ಹೋಯಿತು.

ನಿದ್ದೆ ಮತ್ತು ಹಿಡಿಸಿಕೊಳ್ಳುವವರು, ಶೀತಬಾಧೆ ಯುಳ್ಳವರು ಕಳ್ಳತನಮಾಡಲು ಉಪಯೋಗ ವಿಲ್ಲದವರೆಂದು ಹೇಳುತ್ತಾರೆ. ಅದರ ಮೇಲೆ ನಿನ್ನ ಸಂಗೀತ ಅಷ್ಟೇನೂ ಸುಶ್ರಾವ್ಯವಾಗಿರುವಂಥಾದ್ದೂ ಅಲ್ಲ. ನೀನು ಹಾಡಲು ಶುರುಮಾಡಿದರೆ ಶಂಖಾ ರಾವದ ಹಾಗೆ ಬಹು ದೂರದವರೆಗೆ ಕೇಳಿಸುತ್ತದೆ. ಅದನ್ನು ಕೇಳಿ ಈ ಹೊಲದ ಕಾವಲುಗಾರರು ನಿದ್ದೆ ಯಿಂದೆದ್ದು ಬಂದು ನಿನ್ನನ್ನು ಹಿಡಿಯಬಹುದು. ಮೈ ತುಂಬ ದೊಣ್ಣೇ ಪೂಜೆ ಮಾಡಲೂಬಹುದು, ಆದ್ದರಿಂದ ದಯಮಾಡಿ ಹಾಡುವ ಗೋಜಿಗೆ ಹೋಗ ಬೇಡ. ನಿನ್ನ ಸಂಗೀತ ಕಚೇರಿಯ ಆಲೋಚನೆ ಕಟ್ಟಿಟ್ಟು, ಸಾಧ್ಯವಿದ್ದರೆ ಇನ್ನಿಷ್ಟು ಸೌತೇಕಾಯಿ ಜಡಿದುಕೋ" ಎಂದಿತು.

ಅದಕ್ಕೆ ಕತ್ತೆ, "ನೀನೊಬ್ಬ ಕಾಡು ಮೃಗ. ತಿನ್ನುವು ದೊಂದೇ ಗೊತ್ತಲ್ಲದೆ, ಸಂಗೀತದ ವಿಷಯ ನಿನಗೇನು ಗೊತ್ತಿದೆ? ನಿನ್ನ ಮಾತಿನಿಂದಲೇ ಅದು ಗೊತ್ತಾ

ಆಮೇಲೆ ಕತ್ತೆ ಹಾಡಲು ಪ್ರಾರಂಭಮಾಡಿತು. ಅದರ ಬಾಯಿಯಿಂದ ಹೊರಡುವ ಭಯಂಕರವಾದ ಓಂಡ್ರುಶಬ್ದಕ್ಕೆ ಎಚ್ಚೆತ್ತ ಆ ಹೊಲದ ಒಡೆಯನು ಕೋಪದಿಂದ ಹಲ್ಲು ಕಡಿಯುತ್ತ, ದಪ್ಪವಾದ ದೊಣ್ಣೆಯೊಂದಿಗೆ ಬಂದು ಸಾಧ್ಯವಾದಷ್ಟು ಜೋರಿನಿಂದ ಹೊಡೆದನು. ಕತ್ತೆ ನೋವಿನಿಂದ ಕಿರುಚುತ್ತಾ ದಡೀಲನೆ ಮಗುಚಿ ಬಿತ್ತು.

ಅದು ಎದ್ದು ಓಡಿ ಹೋಗದಂತೆ, ಆ ಹೊಲದೊಡೆಯನು ಅದರ ಕೊರಳಿಗೊಂದು ದೊಡ್ಡ ಕಲ್ಲಿನ ತುಂಡನ್ನು ಕಟ್ಟಿ, ಸೌತೇಕಾಯಿ ಕದ್ದು ತಿನ್ನಲು ಬೇರೆ ಮೃಗಗಳು ಬಂದಿವೆಯೋ ನೋಡಲು ದೂರ ಹೋದನು. ಬೇರೆ ಮೃಗಗಳನ್ನು ಕಾಣದೆ ತನ್ನ ಜಾಗಕ್ಕೆ ಹೋಗಿ ಮತ್ತೆ ನಿದ್ದೆ ಮಾಡಿದನು.

ಕತ್ತೆ ಸ್ವಲ್ಪಹೊತ್ತಿಗೆ ಮೂರ್ಛೆ ತಿಳಿದು, ಕುತ್ತಿಗೆಯಲ್ಲಿರುವ ಕಲ್ಲಿನೊಂದಿಗೇ ಎದ್ದು ಬಹಳ ಕಷ್ಟದಿಂದ ಬೇಲಿ ದಾಟಿ ತಪ್ಪಿಸಿಕೊಂಡು ಹೋಯಿತು.

ದೂರದಲ್ಲಿ ಅದನ್ನು ನೋಡಿದ ನರಿ ಹತ್ತಿರ ಬಂದು, "ತುಂಬಾ ಚೆನ್ನಾಗಿ ಹಾಡಿದೀ! ಕತ್ತೆಬಾವಾ, ನಾನು ಬೇಡೆಂದರೂ ಕೇಳದೆ ಹಾಡದೆ ಬಿಡಲಿಲ್ಲ. ನಿನ್ನ ಸಂಗೀತ ಮೆಚ್ಚಿ ನಿನ್ನ ಕೊರಳಿಗೆ ಕಟ್ಟಿದ ರತ್ನ ಬಹಳ ಚೆನ್ನಾಗಿದೆ" ಎಂದಿತು. ಕತ್ತೆ ಲಜ್ಜೆಯಿಂದ ಬಾಯಿಯೆತ್ತಲಿಲ್ಲ.

ಸಂಗೀತ ಹಾಡಿದ ಈ ಕತ್ತೆಯ ಕಥೆಯನ್ನು ಕೇಳಿ ಅತ್ಯಂತ ಲೋಭಿ, "ನಿಜವೇ. ಈಗ ನಾನು ಕೂಡಾ ತಿಳಿದುಕೊಂಡೆನಪ್ಪಾ. ಸ್ವತಃ ಆಲೋಚನೆ ಮಾಡುವ ಶಕ್ತಿ ಇಲ್ಲದವನು ಮಿತ್ರನ ಮಾತನ್ನಾದರೂ ಕೇಳಬೇಕು. ಇಲ್ಲದಿದ್ದರೆ ಅನುಭವಿಸುತ್ತಾನೆ. ನನ್ನಂಥ ಮಂಕನಿಗೆ ಅಷ್ಟೊಂದು ಜ್ಞಾನಕೂಡ ಇಲ್ಲದೆ ಹೋಯಿತು. ಫಲಿಸಲಾಗದಂತಹ ತನ್ನ ಊಹೆಗಳಿಂದ ಆಕಾಶಕ್ಕೆ ಹಾರಿ ಹೋಗುವವರು, ಕೈಗೆ ಸಿಕ್ಕಿದುದನ್ನು ಕೂಡಾ ಕಳೆದುಕೊಳ್ಳುತ್ತಾರೆ. ಕಣ್ಣು ತುಂಬಾ ಕಂಡ



ಚಿನ್ನ ಬೆಳ್ಳಿಗಳನ್ನು ಬಿಟ್ಟು ರತ್ನಗಳ ಆಸೆಗೆ ಬಿದ್ದೆನಲ್ಲ! ಇದಕ್ಕಿಂತ ಗಾಳಿಗೋಪುರ ಕಟ್ಟಿಕೊಂಡವನೇ ವಾಸಿ! ಆ ಕಥೆ ಕೇಳು" ಎಂದು "ಗಾಳಿಗೋಪುರ" ಕಥೆ ಹೇಳಿದನು :

ಒಂದಾನೊಂದು ಪಟ್ಟಣದಲ್ಲಿ ಸ್ವಭಾವ ಕೃಪಣನೆಂಬ ಒಬ್ಬ ಬ್ರಾಹ್ಮಣನಿದ್ದನು. ಒಂದು ಸಾರಿ ಆ ಬಡ ಬ್ರಾಹ್ಮಣನಿಗೆ ಒಂದು ಸಮಾರಾಧನೆಯಲ್ಲಿ ಹೊಟ್ಟೆ ತುಂಬಾ ಊಟವೂ, ಒಂದು ಮಡಿಕೆ ತುಂಬಾ ಅರಳು ಹಿಟ್ಟೂ ಸಿಕ್ಕಿತು. ಮಧ್ಯಾಹ್ನದ ಊಟ ಮುಗಿಸಿ ಅವನು ಅರಳು ಹಿಟ್ಟಿನ ಮಡಿಕೆ ಎತ್ತಿಕೊಂಡು ತನ್ನ ಮನೆಗೆ ಹಿಂದಿರುಗುತ್ತ, ಒಂದು ಆಲದ ಮರದ ನೆರಳಲ್ಲಿ ವಿಶ್ರಾಂತಿಗಾಗಿ ಕುಳಿತನು. ಮಡಿಕೆಯನ್ನು ಕೆಳಗಿನ ಕೊಂಬೆಗೆ ನೇತಾಡಿಸಿ, ಮರದ ಬೇರಿಗೆ ಒರಗಿ ಕುಳಿತುಕೊಂಡು ಆ ಮಡಿಕೆಯನ್ನೇ ನೋಡುತ್ತಿರಲು, ತಣ್ಣಗಿನ ಗಾಳಿಗೆ ತೂಕಡಿಕೆ ಬಂದಿತು. ಆಗ ಅವನ ಮನಸ್ಸು ಗಾಳಿಗೋಪುರ ನಿರ್ಮಿಸ ತೊಡಗಿತು :

"ಪಕ್ಕದ ಊರಿನಲ್ಲೆಲ್ಲ ಬರಗಾಲ ಬಂದಿದೆಯಂತೆ. ಈ ಊರಿನಲ್ಲಿ ಏಕೆ ಬರಗಾಲ ಬಾರದು ? ಬಂದೇ ಬರುತ್ತೆ. ಹಾಗೆ ಬಂದ ಕೂಡಲೇ ಈ ಒಂದು ಮಡಿಕೆ ಅರಳು ಹಿಟ್ಟನ್ನು ನೂರು ವರಹಗಳಿಗೆ ಮಾರ ಬಹುದು. ಮಾರುತ್ತೇನೆ. ಆ ಹಣದಿಂದ ಎರಡು ಹೆಣ್ಣಾಡುಗಳನ್ನು ಕೊಂಡುಕೊಳ್ಳಬಹುದು. ಆರು ತಿಂಗಳಿಗೊಂದು ಸಾರಿ ಅವು ಈನುತ್ತವೆ. ಆಗ ಬೇಗ ದಲ್ಲೇ ಆಡುಗಳ ಮಂದೆಯೇ ತಯಾರಾಗುತ್ತದೆ. ಅವುಗಳಲ್ಲಿ ಕೆಲವನ್ನು ಮಾರಿ ಹಸುಗಳನ್ನು ಕೊಂಡು ಕೊಳ್ಳುತ್ತೇನೆ. ಹಸುಗಳು ಪ್ರತಿ ವರ್ಷವೂ ಕರು ಹಾಕಿದರೆ ಹಸುಗಳ ಮಂದೆಯೇ ಆಗುತ್ತದಲ್ಲ ! ಈ ನಡುವೆ ಕೆಲವು ಕರುಗಳನ್ನು ಮಾರಿದರೆ ಎಮ್ಮೆ ಗಳನ್ನೂ ಕೊಂಡುಕೊಳ್ಳಲು ಸಾಧ್ಯವಾಗುತ್ತದೆ. ಅವು ಗಳ ಮಂದೆಯೂ ತಯಾರಾಗುತ್ತದೆ. ಕೆಲವು ಎಮ್ಮೆ ಗಳನ್ನು ಮಾರಿ ಹೆಣ್ಣು ಕುದುರೆಗಳನ್ನು ಕೊಂಡು ಕೊಳ್ಳುತ್ತೇನೆ. ಅವುಗಳಿಗೆ ಮರಿಗಳು ಹುಟ್ಟಿ ತನ್ನಂತೆ ಕುದುರೆಯ ಮಂದೆಯೂ ತಯಾರಾಗುತ್ತದೆ. ಕುದುರೆಗಳಿಗೆ ಒಳ್ಳೆ ಬೆಲೆಯುಂಟು. ಅವುಗಳನ್ನು ಮಾರಿ ಬರುವ ಧನವನ್ನಿಟ್ಟುಕೊಂಡು ದೊಡ್ಡ ಮನೆ ಯನ್ನು ಕಟ್ಟಿಸಿ ಚಿನ್ನ ಬೆಳ್ಳಿಗಳ ವಸ್ತುಗಳನ್ನು ಮಾಡಿಸಿ, ಕೋಣೆಗಳಲ್ಲಿ ಆಸನಗಳನ್ನೂ, ದೊಡ್ಡ ಮಂಚವನ್ನೂ ಅಳವಡಿಸಿಬಿಡುತ್ತೇನೆ, ನನ್ನ ವೈಭವ ನೋಡಿ ಯಾವನೋ ಬ್ರಾಹ್ಮಣನು ತನ್ನ ಮಗಳನು. ನನಗೆ ಕನ್ಯಾದಾನ ಮಾಡಿಕೊಟ್ಟುಬಿಡುತ್ತಾನ್ನೆ ಆಮೇಲೆ ಹತ್ತನೇ ತಿಂಗಳಿನಲ್ಲಿ ನನ್ನ ಹೆಂಡತಿ ಗಂಡು ಮಗನನ್ನು ಹಡೆಯುತ್ತಾಳೆ. ಅವನಿಗೆ ಸೋಮ ಶರ್ಮ ಎಂದು ಹೆಸರಿಡುತ್ತೇನೆ. ಅವನು ಅಂಬೆಗಾ ಲಿಟ್ಟು ಸರಿದಾಡುವಾಗ, ನಾನು ಪುಸ್ತಕ ತೆಗೆದು ಕೊಂಡು ಅಶ್ವಶಾಲೆಯ ಹಿಂದೆ ಓದುತ್ತಾ ಇರುತ್ತೇನೆ. ಮಗು ಸೋಮಶರ್ಮ ನನ್ನನ್ನು ನೋಡಿ ತಾಯಿಯ ಮಡಿಲಿನಿಂದ ಜಾರಿ ಅಂಬೆಗಾಲಿಟ್ಟುಕೊಂಡು ಕುದುರೆ ಗಳ ಗೊರಸಿನ ಹತ್ತಿರದಲ್ಲೇ ಬರುತ್ತಾನೆ. ನಾನು ಕೋಪದಿಂದ ಹೆಂಡತಿಯನ್ನು ನೋಡಿ, 'ಮಗುವನ್ನು ಎತ್ತಿಕೊಳ್ಳೇ ! ಎತ್ತಿಕೊಳ್ಳೇ !' ಎಂದು ಕೂಗು ತ್ತೇನೆ. ಆವಳು ಎಂಥದೋ ಮನೆಗೆಲಸದಲ್ಲಿ ನಿಮಗ್ನ ಳಾಗಿದ್ದು ನನ್ನ ಮಾತು ಕೇಳಿದರೂ ಕೇಳದಂತಿರುವು ದನ್ನು ನೋಡಿ ನನಗೆ ಸಿಟ್ಟುಬರುತ್ತದೆ, ಕೋಲು ತೆಗೆದು ಒಂದೇಟು ಅವಳ ಬೆನ್ನಿಗೆ ಕೊಡುತ್ತೇನೆ..."

ಬ್ರಾಹ್ಮಣನು ಕೋಲನ್ನೆತ್ತಿ ಗಟ್ಟಿಯಾಗಿ ಬೀಸಿ ಹೊಡೆಯುವಾಗ ಮಡಿಕೆಗೆ ತಗಲಿ ನೂರುಚೂರಾಗಿ ಕೆಳಗೆ ಬಿತ್ತು. ಅರಳು ಹಿಟ್ಟು ಪೂರಾ ಚೆಲ್ಲಿಹೋಯಿತು. ಆದರ ಸ್ವಲ್ಪ ಭಾಗವು ಬ್ರಾಹ್ಮಣನ ತಲೆಯ ಮೇಲೂ, ಭುಜಗಳ ಮೇಲೂ ಬಿದ್ದಿತು. ಗಾಳಿ ಗೋಪುರ ಮಾಯವಾಗಿ ಹೋಯಿತು.





# ಕರಡಿಕೆಂಗಣ್ಣ

## ೧೯

[ ಮರ್ಕಟನ ಮಂತ್ರದಂಡವನ್ನು ತಂದವನಿಗೆ, ತಾನು ದತ್ತಕ್ಕೆ ಮಾಡಿಕೊಳ್ಳಲಿರುವ ಮಗಳನ್ನು ಕೊಟ್ಟು ಅರ್ಧ ರಾಜ್ಯವನ್ನೂ ಕೊಡುವೆನೆಂದು ಜಿತಕೇತು ರಾಜನು ಪ್ರಕಟಿಸಿದನು, ಮಾಯಾಮರ್ಕಟನು ಕೋಟೆಯ ಗೋಡೆಯ ಮೇಲೆ ಬರುವುದನ್ನು ನೋಡಿ, ಆನೆಯ ಮೇಲಿದ್ದ ಆಟವಿಕನು ಮರ್ಕಟನ ಮೇಲೆ ಬಾಣ ಪ್ರಯೋಗ ಮಾಡಿದನು. ಮರ್ಕಟನು ಕಾಲಿಗೆ ತಾಗಿದ ಆ ಬಾಣವನ್ನು ಕಿತ್ತು, ಕಾಳೀವರ್ಮ, ಕರಡಿಕೆಂಗಣ್ಣರ ಕಡೆಗೇ ಎಸೆದನು.]

**ಕಾ**ಲಿಗೆ ಬಾಣದ ಪೆಟ್ಟು ಬೀಳುವುದಕ್ಕೆ ಮೊದಲು ಮಾಯಾಮರ್ಕಟನು "ನನ್ನ ಮಂತ್ರದಂಡ, ಮಂತ್ರದಂಡ" ಎಂದು ಗಟ್ಟಿಯಾಗಿ ಕೂಗಿದುದನ್ನು ಕರಡಿಕೆಂಗಣ್ಣನೂ, ಕಾಳೀವರ್ಮ ಮೊದಲಾದವರೂ ಕೇಳಿದರು. ಅದನ್ನು ಕೇಳಿ ಕರಡಿಕೆಂಗಣ್ಣನಿಗಾದ ಆಶ್ಚರ್ಯ ಅಷ್ಟಿಷ್ಟಲ್ಲ.

"ಕೇಳಿದೆಯಾ ಶಿಷ್ಯಾ, ಕಾಳೀವರ್ಮಾ! ಆ ಮರ್ಕಟ ಮುಖದವನ ಕೂಗು ಅರ್ಥವಾಯಿತೆ? ನಿನಗೇನು ತೋರುತ್ತದೆ? ನನ್ನಿಂದ ಅವನು ಕದ್ದುಕೊಂಡ ಮಂತ್ರದಂಡವನ್ನು ಎಲ್ಲಿಯೋ ಕಳೆದುಕೊಂಡಿದ್ದಾನೆ. ಅಂದರೆ ಬೇರೆ ಯಾರೋ ಅವನ ಕೈಯಿಂದ ಅದನ್ನು ಕದ್ದಿರಬೇಕು. ಅದು ಯಾರಾಗಿರಬಹುದು? ಇಷ್ಟರವರೆಗೆ ಆ ಮಂತ್ರದಂಡ ಅವನ ಹತ್ತಿರ ಇದೆಯೆಂದು ನಾವು ನಂಬಿದ್ದೆವು. ಅದೀಗ ಅವನ ಹತ್ತಿರ ಇಲ್ಲ. ನಮ್ಮ ಸಮಸ್ಯೆ ಇನ್ನಿಷ್ಟು ಸಿಕ್ಕಿಗೆ ಬಿತ್ತಲ್ಲ? ನಾವೇನು ಮಾಡೋಣ" ಎಂದನು ಕೆಂಗಣ್ಣ ಮಾಂತ್ರಿಕ.

ಕಾಳೀವರ್ಮನೂ ಬೆರಗುಬಡೆದವನಾಗಿ ತಲೆಯಾಡಿಸುತ್ತ, "ಹೌದು ಗುರುವೇ. ಆ ಕೋತಿಕೊರಮನ ಕೈಯಿಂದ ಆ ಮಂತ್ರದಂಡವನ್ನು ಮತ್ತಾರೋ ತಸ್ಕರ ಮಾಡಿರಬೇಕು. ಅದು ಯಾರೆಂದು



ಹೇಗೆ ತಿಳಿದುಕೊಳ್ಳುವುದೋ ? ಅದೂ ಅಲ್ಲದೆ ನಾವು ಈ ನಗರದೊಳಗೆ ಪ್ರವೇಶಿಸಬೇಕೆಂದರೂ ಸುಲಭಸಾಧ್ಯವಾಗಿ ಕಾಣುವುದಿಲ್ಲ. ಈ ರಾಜನು ಕೋಟೆಯ ದ್ವಾರವನ್ನು ಕಬ್ಬಿಣದಿಂದ ಮಾಡಿಸಿದ್ದಾನೆ. ದುರ್ಮುಖರಾಜನ ಕೋಟೆಯ ಬಾಗಿಲು ಮರದಿಂದಾದುದರಿಂದ ನಾವು ಬೆಂಕಿ ಹಚ್ಚಿ ಕೋಟೆಯೊಳಗೆ ಪ್ರವೇಶಿಸಲು ಸಾಧ್ಯವಾಯಿತು. ಇಲ್ಲಿ ಆ ಉಪಾಯ ನಡೆಯದು" ಎಂದನು.

ಕರಡಿಕೆಂಗಣ್ಣ ಮಾಂತ್ರಿಕನು ತನ್ನ ಒರೆಯೊಳಗಿನಿಂದ ದೀರ್ಘವಾದ ಖಡ್ಗವನ್ನು ಸೆಳೆದುಕೊಂಡು, "ನಾವು ಈ ರಾತ್ರಿಯಲ್ಲಿ ಕೋಟೆಯ ಹೊರಗೇ ಜಾಗ ಹುಡುಕಿ ಡೇರೆ ಹಾಕಿಕೊಂಡು, ಇರೋಣ. ಕೋಟೆಯ ಬಾಗಿಲನ್ನು ಹೇಗೆ ಭೇದಿಸುವುದೆಂದು ಸಾವಧಾನವಾಗಿ ಆಲೋಚನೆಮಾಡಿ ನಿರ್ಧರಿಸೋಣ." ಎಂದನು.

ಆ ಮಾತು ಕೇಳಿ ಉಗ್ರದಂಡ ರಾಕ್ಷಸನು ಕೋಪದಿಂದ ಕಟಕಟನೆ ಹಲ್ಲು ಕಡಿಯುತ್ತ, "ಹುಂ. ನನ್ನ ಈ ಕಲ್ಲಿನ ಗದೆ ಕೋಟೆಯ ದ್ವಾರವನ್ನು ಒಡೆಯಲಾರದೆ ಹೋಯಿತು. ಗೋಡೆಯನ್ನಾದರೂ ಒಡೆಯಲು ಸಾಧ್ಯವೋ ನೋಡಿಬಿಡುತ್ತೇನೆ" ಎಂದು ಹೇಳುತ್ತ, ವೇಗವಾಗಿ ಹೋಗಿ ಗದೆಯನ್ನೆತ್ತಿ ಕೋಟೆಯ ಗೋಡೆಯ ಮೇಲೆ ಹೊಡೆದನು. ಆ ಹೊಡೆತಕ್ಕೆ ಎರಡು ಮೂರು ಕಲ್ಲುಗಳು ಕೆಳಗೆ ಬಿದ್ದುವು. ಅದನ್ನು ನೋಡಿದ ಗೋಡೆಯ ಮೇಲಿದ್ದ ಸೈನಿಕರು ಉಗ್ರದಂಡ ರಾಕ್ಷಸನ ಮೇಲೆ ಬಾಣಗಳನ್ನು ಪ್ರಯೋಗಿಸಿದರು. ಉಗ್ರದಂಡನು ಮೈ ಕೊಡರಿಕೊಂಡು ಆ ಬಾಣಗಳನ್ನು ಉದುರಿಸಿಕೊಳ್ಳುತ್ತ, ಇನ್ನೊಮ್ಮೆ ಹೊಡೆಯಲು ಗದೆಯನ್ನೆತ್ತಿದನು.

ಕರಡಿಕೆಂಗಣ್ಣನು ಉಗ್ರದಂಡನನ್ನು ಈಚೆಗೆ ಬರುವಂತೆ ಹೇಳಿ, ಕಾಳೀವರ್ಮನೊಂದಿಗೆ, "ಹೀಗೆಲ್ಲಾ ಕೋಟೆಯೊಳಗೆ ನುಗ್ಗುವುದರಿಂದ, ಮತ್ತಾರೋ ಅಪಹರಿಸಿದ ನನ್ನ ಮಂತ್ರದಂಡವು ಇನ್ನಷ್ಟು ರಹಸ್ಯದೊಳಗೆ ಹೋದೀತು. ಬಲವಿದೆಯೆಂದು ದುಡುಕುವುದರಿಂದ ನಮ್ಮ ಕೆಲಸವಾಗದು. ಯಾವುದಕ್ಕೂ ಯೋಚನೆಮಾಡಿ ಕೆಲಸ ಮುಂದುವರಿಸಬೇಕು. ಈಗ ಹಿಂಜರಿಯುವುದೇ ಒಳ್ಳೇದು" ಎಂದನು.

ಕರಡಿಕೆಂಗಣ್ಣನು ಇಲ್ಲಿ ಹೀಗೆ ಯೋಚನೆಗೆ ಬಿದ್ದ ಸಮಯದಲ್ಲಿ, ಈ ಮೊದಲು ರಾಜಭವನದ ಮುಂದೆ ಮಾಯಾಮರ್ಕಟನ ಕೈಯಿಂದ ಜಾರಿಬಿದ್ದ ಮಂತ್ರದಂಡವನ್ನು ಎತ್ತಿಕೊಂಡು ತಮ್ಮ ಜೋಳಿಗೆಯೊಳಗೆ ಹಾಕಿಕೊಂಡ ಬೈರಾಗಿ ಯುವಕರಿಬ್ಬರು, ತಮ್ಮ ಗುರುವಿನ ಬಳಿಗೆ ಹೊರಟಿದ್ದರಷ್ಟೆ? ಅವರ ಗುರು ಊರ ಹೊರಗಿನ ಒಂದು ಆಲದ ಮರದ ಬುಡದಲ್ಲಿ ಕುಳಿತುಕೊಂಡು ಜಪಮಾಡುತ್ತಿದ್ದನು.

ಆ ಯುವಕ ಬೈರಾಗಿಗಳಲ್ಲಿ ಚಿಕ್ಕವನ ಜೋಳಿಗೆಯಲ್ಲಿ ಆ ಮಂತ್ರದಂಡವು ಅಡಗಿತ್ತು. ಗುರುವಿನ ಬಳಿಗೆ ಹೋಗುವ ಮೊದಲು ದೊಡ್ಡವನು ಚಿಕ್ಕವನ ಜೋಳಿಗೆಯಿಂದ ಆ ಮಂತ್ರದಂಡವನ್ನು ತನ್ನ ಕೈಗೆ

ಎತ್ತಿಕೊಂಡು, "ತಮ್ಮಾ, ಗುರುಗಳು ಕಣ್ಣು ಮುಚ್ಚಿ ಧ್ಯಾನದಲ್ಲಿದ್ದಾರೆ. ಈಗ ಎಬ್ಬಿಸುವುಬೇಡ. ಅವರಿಗೆ ಈ ಮಂತ್ರದಂಡವನ್ನು ತೋರಿಸುವುದಕ್ಕೆ ಮೊದಲು ಇದರ ಮಹಿಮೆ ಎಂತಹುದೆಂದು ನಾವೇ ಒಂದಿಷ್ಟು ನಮ್ಮ ಮಂತ್ರ ಉಚ್ಚರಿಸಿ ಸ್ವಲ್ಪ ಪರೀಕ್ಷಿಸಿ ನೋಡೋಣವೇ ?" ಎಂದನು.

"ನೋಡಿದರಾಯಿತು" ಎಂದು ಚಿಕ್ಕ ಬೈರಾಗಿ ತಲೆಯಾಡಿಸಿದನು. ದೊಡ್ಡವನು ಮಂತ್ರದಂಡವನ್ನು ಮೇಲೆತ್ತಿ ಹಿಡಿದು, "ಈ ಮಂತ್ರದಂಡದ ಒಡೆಯ ನಾಣೆ! ಹ್ರೂಂ ಹ್ರಾಂ ಹ್ರೀಂ!ಆಗಮಾಗಮ! ಮಂತ್ರ ದಂಡಾಧಿದೇವತಾ! ಈ ಸ್ಥಳದಲ್ಲಿ ನಿಧಿಯ ಬಾಗಿಲು ತೆರೆ!" ಎನ್ನುತ್ತ ಅದರಿಂದ ನೆಲದ ಮೇಲೆ ಒಂದೇಟು ಕೊಟ್ಟನು.

ಆಗ ಉಂಟಾದ ದೊಡ್ಡ ಶಬ್ದಕ್ಕೆ ಜಪಮಾಡು ತ್ತಿದ್ದ ಗುರು ಕಣ್ಣು ಮುಚ್ಚಿಕೊಂಡೇ "ಎಲೋ! ಯಾರೋದೂ? ಈ ಗುರು ಭೈರವ ಬೈರಾಗಿಯ ಇದಿರಿನಲ್ಲಿಯೇ ತಪ್ಪು ತಪ್ಪಾಗಿ ಮಂತ್ರವನ್ನು ಉಚ್ಚರಿಸುವ ಪಾಪಿ ಯಾರೋ ನೀನು? ಈಗಲೇ ನಿನ್ನನ್ನು ಭಸ್ಮಮಾಡಿ ಬಿಡುತ್ತೇನೆ!" ಎನ್ನುತ್ತ, ಬೆಳ್ಳಿ ಮತ್ತು ಹಿತ್ತಾಳಿಯ ಹೂವುಗಳನ್ನು ಹೊದಿಸಿದ ತನ್ನ ಗಿಡ್ಡಾದ ಮಂತ್ರದಂಡವನ್ನು ಮೇಲೆತ್ತಿದನು.

ತಮ್ಮ ಗುರು ಹೇಳಿದ ಮಾತುಗಳಿಂದ ಹೆದರಿದ ಶಿಷ್ಯ ಬೈರಾಗಿಗಳಿಬ್ಬರೂ, ನೆಲದಲ್ಲಿ ತಮ್ಮ ಮಂತ್ರ ದಂಡದ ಹೊಡೆತದಿಂದಾದ ಘಾತದಿಂದ ನೆಲವು ಸೀಳಿದುದನ್ನು ನೋಡಿ ಇನ್ನಿಷ್ಟು ಹೆದರಿದರು. ಮರುಕ್ಷಣದಲ್ಲಿ ಆ ಸೀಳಿನಿಂದ ಚಿಳ್ಳನೆ ನೀರು ಹಾರುವು ದನ್ನು ನೋಡಿ ಭಯದೊಂದಿಗೆ ಆಶ್ಚರ್ಯವೂ ಕೂಡಿತು. ಆಗಲೇ ಗುರು ಬೈರಾಗಿಯೂ ಕೋಪದಿಂದ ಕಣ್ಣು ತೆರೆಯಲು, ಅವನ ಮೇಲೆಯೂ ನೀರು ಚಿಮ್ಮಿ ಜಡಿಮಳೆಯಂತೆ ಜಿರಿಜಿರಿ ಸುರಿಯಿತು!

ಭೈರವ ಬೈರಾಗಿ "ಹೋ! ಗುರುಪ್ರಭೋ!" ಎಂದು ಹಾರಿ ನಿಂತು, "ಇದೇನಿದೇನು! ಮಿಂಚಿಲ್ಲ! ಗುಡುಗಿಲ್ಲ! ಮೋಡವೂ ಇಲ್ಲ! ಮಳೆಸುರಿಯುವು ದೆಂದರೇನಿದು?" ಎನ್ನುತ್ತ ತುಸು ದೂರದಲ್ಲಿ





ನಿಂತಿರುವ ತನ್ನ ಶಿಷ್ಯರನ್ನು ನೋಡಿ, "ಎಲೋ! ಭೂಮಿಯಿಂದ ಆಕಾಶಕ್ಕೆ ನೀರಿನ ಧಾರೆ ಹಾರುತ್ತಿದೆಯಲ್ಲಾ? ಏನು ಈ ವಿಚಿತ್ರ! ಯಾರೋ ಏನೋ ಮಂತ್ರೋಚ್ಚಾರ ಮಾಡಿದರಲ್ಲಾ? ಯಾರದು? ಎಲ್ಲಿದ್ದಾರೆ?" ಎಂದನು.

ಆ ಮಾತು ಕೇಳಿ ಬೈರಾಗಿ ಶಿಷ್ಯರಿಬ್ಬರಿಗೂ ಸ್ವಲ್ಪ ಧೈರ್ಯ ಬಂತು. "ಭೈರವ ಗುರೋ! ಅದು ನಾವೇ! ನಾವೇ! ನಮ್ಮ ಮಂತ್ರಶಕ್ತಿಯಿಂದ ಈ ನೀರಿನ ಬುಗ್ಗೆಯನ್ನು ಬರಮಾಡಿದ್ದೇವೆ. ಇದರಿಂದ ನಮ್ಮ ವಿದ್ಯೆ ಪೂರ್ತಿಯಾದಂತಾಯಿತಷ್ಟೆ?" ಎಂದು ಕೇಳಿದರು.

ಏನು ನಡೆಯಿತೆಂಬುದು ಅರ್ಥವಾಗದೆ ಭೈರವ ಬೈರಾಗಿ ಆಶ್ಚರ್ಯಪಡುತ್ತ, ಶಿಷ್ಯರ ಬಳಿಗೆ ಬಂದು, ದೊಡ್ಡ ಶಿಷ್ಯನ ಕೈಯಲ್ಲಿದ್ದ ಮಂತ್ರದಂಡವನ್ನು ನೋಡಿ, ಇನ್ನಷ್ಟು ಆಶ್ಚರ್ಯದಿಂದ, "ಏನಿದು? ಮಂತ್ರದಂಡದ ಹಾಗಿದೆಯಲ್ಲ? ಎಲ್ಲಿಂದ? ಹೇಗೆ ಸಂಪಾದಿಸಿದಿರಿ?" ಎಂದನು.

"ಗುರುವೇ, ಇದು ಮಂತ್ರದಂಡದ ಹಾಗಿರುವುದೇನೂ ಅಲ್ಲ. ನಿಜವಾಗಿಯೂ ಅದ್ಭುತ ಮಹಿಮೆಯ ಮಂತ್ರದಂಡವೇ! ನನಗೆ ತಿಳಿದ ಮಂತ್ರದ ಮೂರೇ ಮೂರು ಚೂರುಗಳನ್ನು ಉಚ್ಚರಿಸಿ ನಿಧಿಯ ಬಾಗಿಲು ತೆರೆಯಲು ಹೇಳಿದರೆ, ಪಾತಾಳ ಗಂಗೆಯನ್ನೇ ಮೇಲಕ್ಕೇ ತಂದಿತು ಈ ಮಂತ್ರದಂಡ" ಎಂದ ದೊಡ್ಡ ಶಿಷ್ಯ.

ಭೈರವ ಬೈರಾಗಿ ಶಿಷ್ಯನ ಕೈಯಲ್ಲಿದ್ದ ಆ ಮಂತ್ರದಂಡವನ್ನು ತೆಗೆದುಕೊಂಡು, ಅದನ್ನು ಹಾಗೆ ಹೀಗೆ ತಿರುಗಿಸಿ ನೋಡಿ, "ಇದು ಯಾವ ಮಾಂತ್ರಿಕನ ಕೈಯಲ್ಲೋ ಬಹಳ ಕಾಲದಿಂದ ನಲುಗಿ ತುಂಬಾ ನಯವಾಗಿದೆ. ಇದು ನಿಮ್ಮ ಕೈಗೆ ಹೇಗೆ ಬಂತು? ಕದ್ದುಕೊಂಡಿರೇನು? ಇದರ ಯಜಮಾನ ಏನಾದ?" ಎಂದು ಕೇಳಿದನು.

ದೊಡ್ಡ ಶಿಷ್ಯನು ಚಿಕ್ಕ ಶಿಷ್ಯನಿಗೆ ಮಾತಾಡಬೇಡವೆಂದು ಸನ್ನೆ ದೋರಿ, ಗುರುವಿನ ಕೈಯಲ್ಲಿದ ಮಂತ್ರದಂಡವನ್ನು ತಟ್ಟನೆ ಎಳೆದುಕೊಂಡು, "ಗುರುವೇ, ಮೊದಲು ಈ ಜಲಧಾರೆಯನ್ನು ನಿಲ್ಲಿಸಬೇಕು. ಇಲ್ಲದಿದ್ದರೆ ಕೆಲವು ಗಂಟೆಗಳಲ್ಲಿ ನಗರವೇ ಮುಳುಗಿ ಹೋಗಬಹುದು." ಎಂದು ಮಂತ್ರದಂಡವನ್ನು ಮೇಲೆತ್ತಿ, "ನಿಧಿ ಧ್ವಾರವನ್ನು ಮುಚ್ಚು! ನಿಧಿ ದ್ವಾರವನ್ನು ಮುಚ್ಚು!" ಎನ್ನುತ್ತ ನೀರಿನ ಧಾರೆ ಬರುವ ಪ್ರದೇಶದಲ್ಲಿ ಬಲವಾಗಿ ಹೊಡೆದನು.

ಈ ಸಾರಿ ಮಂತ್ರದಂಡದ ಏಟಿಗೆ ಭೂಮಿ ಫಳ್ಳನೆ ಒಡೆದು ಹೋಗಿ, ಮನುಷ್ಯನನ್ನು ಹಿಡಿಸುವಂತಹ ಕನ್ನವೇ ಉಂಟಾಯಿತು. ಇದನ್ನು ನೋಡಿ ಭೈರವ ಬೈರಾಗಿ ಹಾರಿ ಕುಣಿದು, "ಎಲವ್ವೋ ಶಿಷ್ಯೋಪ ಶಿಷ್ಯರೆ! ಇದು ನಿಮಗೆ ಹೇಗೆ ಬೇಕಾದರೂ ಸಿಕ್ಕಿರಲಿ! ಅದ್ಭುತ ಶಕ್ತಿಯ ಈ ಮಂತ್ರದಂಡವನ್ನು ನನಗೆ ಕಾಣಿಕೆಯಾಗಿ ತಂದಿದ್ದೀರಿ! ನಿಮ್ಮ ಗುರುಭಕ್ತಿಗೆ ಮೆಚ್ಚಿದೆ! ಜಲಧಾರೆ ನಿಂತು ಹೋಗಿ ನಿಧಿಯ

ದ್ವಾರಗಳು ತೆರೆದ ಹಾಗಿದೆ. ಇನ್ನು ನೀವು ಇದರೊಳಗೆ ಇಳಿದು ಅಲ್ಲಿರುವ ನಿಧಿ ಏನೆಂಬುದನ್ನು ನೋಡಿ ಬನ್ನಿ " ಎಂದನು.

ಚಿಕ್ಕ ಶಿಷ್ಯನು ಮಂತ್ರದಂಡದ ಕಡೆಗೆ ಅನುಮಾನ ಪಡುವವನ ಹಾಗೆ ನೋಡುತ್ತ, "ಭೈರವ ಗುರುವೇ! ಎಂತಹುದೋ ಈ ಮಂತ್ರದಂಡದ ಶಕ್ತಿಗಳನ್ನು ನಂಬಿ, ನಾವು ಯಾವುದಾದರೂ ಇರುಕಾಟದಲ್ಲಿ ಸಿಕ್ಕಿಕೊಳ್ಳುತ್ತೇವೋ ಏನೊ! ನನಗೆ ಯಾಕೋ ಭಯವಾಗಿದೆ. ನಿಧಿಯ ಬಾಗಿಲು ತೆರೆಯಬೇಕೆಂದರೆ, ಭೂಮಿಯೊಳಗಿನ ನೀರಿನ ಬುಗ್ಗೆಯನ್ನು ಆಕಾಶಕ್ಕೆ ಹಾರಿಸುತ್ತದೆ. ನಾವು ಕೇಳಿದ್ದೊಂದು, ಇದು ಮಾಡಿದ್ದೊಂದು. ಈ ಸಂಗತಿ ಗಮನಿಸಿದಿರಾ? ಇದರಿಂದ ನಿಧಿ ದೊರಕುವುದೆಂದು ನನಗೆ ನಂಬಲಾಗುವುದಿಲ್ಲ. ಇದು ನಿಧಿಯ ಬಾಗಿಲೋ, ಪಾತಾಳದ ಬಾಗಿಲೋ ಹೇಗೆ ನಂಬುವುದು ? " ಎಂದನು.

ಶಿಷ್ಯನ ಮಾತು ಕೇಳಿದ ಮೇಲೆ ಭೈರವ ಬೈರಾಗಿಗೂ ಆ ಮಂತ್ರದಂಡವನ್ನು ಕುರಿತು ಶಂಕೆಯುಂಟಾಯಿತು. ಅದು ಕೋರಿದುದಕ್ಕೆ ಬದಲಾಗಿ ಬೇರೊಂದನ್ನು ಕೊಡಲು ಪ್ರಾರಂಭಿಸಿಬಿಟ್ಟರೆ ಅದರಿಂದ ಎಂತಹ ಅಪಾಯಕ್ಕಾದರೂ ದಾರಿಯಾದೀತಲ್ಲ! ಪುಣ್ಯಕಾಲ, ನೀರು ಚಿಮ್ಮುವುದು ನಿಂತು ಸುರಂಗದ ಬಾಯಿ ಅಗಲವಾಗಿ ಸುಮ್ಮನಾಗಿದೆ. ಸದ್ಯ ಜಲ ಪ್ರಳಯದ ಅಪಾಯ ತಪ್ಪಿತು.

ಬೈರಾಗಿ ಹೀಗೆ ಆಲೋಚಿಸುವಾಗ, ದೊಡ್ಡ ಶಿಷ್ಯನ ಕೈಯಿಂದ ಆ ಮಂತ್ರದಂಡವನ್ನು ತೆಗೆದುಕೊಂಡು ಅದನ್ನು ಪರೀಕ್ಷಿಸಿ ನೋಡ ತೊಡಗಿದನು. ಆಗ ದೊಡ್ಡ ಶಿಷ್ಯನು ದೊಡ್ಡದಾಗಿ ನಕ್ಕು, "ಗುರುವೇ, ಇದರ ಶಕ್ತಿಯ ಪರೀಕ್ಷೆಮಾಡಿಕೊಂಡು ಹೊತ್ತು ಕಳೆಯುವುದಕ್ಕೆ ಬದಲಾಗಿ, ಒಂದು ಕೆಲಸ ಮಾಡೋಣವೇ? ಇದು ಮಂತ್ರಗಾರನಾದ ಒಬ್ಬ ಮರ್ಕಟ ಮುಖದವನಿಂದ ನಮಗೆ ಸಿಕ್ಕಿತು. ಅವನೀಗ



ಜಿತಕೇತು ರಾಜನ ಪ್ರಧಾನಮಂತ್ರಿ! ಕಳೆದು ಹೋದ ಈ ಮಂತ್ರದಂಡಕ್ಕಾಗಿ ಆಕಾಶ ಪಾತಾಳಗಳನ್ನು ಒಂದು ಮಾಡುವವನ ಹಾಗೆ ಕಾಣುತ್ತಾನೆ. ಇದನ್ನು ತಿರುಗಿ ತಂದುಕೊಟ್ಟವರಿಗೆ ಅರ್ಧರಾಜ್ಯದೊಂದಿಗೆ ತನ್ನ ಮಗಳನ್ನು ಕೂಡಾ ಕೊಟ್ಟು ಮದುವೆಮಾಡುವೆನೆಂದು ಆ ರಾಜನೂ ಹೇಳಿದ್ದಾನೆ." ಎಂದನು.

ಅರ್ಧರಾಜ್ಯದೊಂದಿಗೆ ರಾಜಕುಮಾರಿ ಎಂಬ ಮಾತನ್ನು ಕೇಳಿದ ಕೂಡಲೇ ಭೈರವ ಬೈರಾಗಿ, "ಗುರುಪ್ರಭೋ!" ಎಂದು ಕೂಗಿ, "ಎಲೋ ಶಿಷ್ಯ ಶಿಖಾಮಣಿಗಳೇ, ಇಷ್ಟೊಂದು ಮುಖ್ಯ ವಿಷಯವನ್ನು ಮೊದಲೇ ನನಗೆ ಹೇಳದೆ, ಇಷ್ಟು ಹೊತ್ತು ಮುಚ್ಚಿಟ್ಟು ಆಟ ತೋರಿಸಿದಿರೇನು ? ನಾನು ಅರ್ಧ ರಾಜ್ಯಕ್ಕೆ ಒಡೆಯನಾಗುವುದೂ, ನಿಮ್ಮಲ್ಲೊಬ್ಬನು ರಾಜಕುಮಾರಿಯ ಗಂಡನಾಗುವುದೂ ಚೆನ್ನಾಗಿಯೇ ಇರುತ್ತೆ. ಆದರೆ ಒಂದು, ಈ ರಾಜರ ಮಾತುಗಳನ್ನು ಅಷ್ಟಾಗಿ ನಂಬಲೇ ಬಾರದು. ಜಿತಕೇತು ರಾಜನು




ನಮ್ಮಿಂದ ಮಂತ್ರದಂಡವನ್ನು ಪಡೆದುಕೊಂಡು, ತಲೆ ಕಡಿಸಿಬಿಟ್ಟರೆ ನಾವೇನು ಮಾಡಲು ಸಾಧ್ಯವಿದೆ? ಅವನನ್ನು ಕೇಳುವವರು ಯಾರು? ಇದನ್ನೂ ಯೋಚಿಸಬೇಕು!" ಎಂದು ಹೇಳಿ ಆಲದಮರದ ಬುಡಕ್ಕೆಹೋಗಿ ಚಕ್ಕನೆಕುಳಿತು ತಲೆ ಹಿಡಿದುಕೊಂಡನು.

"ಅದಕ್ಕೇ ನಿಮ್ಮ ಯೋಚನೆ ಕೇಳಿದೆವು" ಎನ್ನುತ್ತ ಶಿಷ್ಯರೂ ಅಪ್ರತಿಭರಾದರು. ರಾಜನ ಮಾತನ್ನು ನಂಬುವ ವಿಷಯದಲ್ಲಿ ಅವರಿಗೂ ಅನುಮಾನವಾಯಿತು. ಚಿಕ್ಕ ಶಿಷ್ಯನು ಭೂಮಿಯಲ್ಲಿ ಏರ್ಪಟ್ಟ ಬಾಯಿಯ ಬದಿಗೆ ಹೋಗಿ, ಕೆಳಕ್ಕೆ ಕಾಲು ಹಾಕಲು ನೋಡುವಾಗ ಅವನು ಬೀಳದಂತೆ ದೊಡ್ಡ ಶಿಷ್ಯ ಅವನ ಕೈ ಹಿಡಿದನು.

"ಭೈರವ ಗುರೋ! ಇಲ್ಲಿ ಏನೋ ಮೆಟ್ಟಲುಗಳಿವೆ. ಇದೀಗ ನಿಜವಾದ ಭೂಸುರಂಗವೇ! ಮಂತ್ರದಂಡವು ನಮಗೆ ನಿಧಿಯ ದ್ವಾರವನ್ನೇ ತೆರೆದ ಹಾಗಿದೆ! ಸಾಧಾರಣವಾಗಿ ದೊಡ್ಡ ದೊಡ್ಡ ನಿಧಿಗಳು ಸುರಂಗದೊಳಗೇ ಇರುತ್ತವೆ. ನಮ್ಮ ಅದೃಷ್ಟ ಚೆನ್ನಾಗೇ ಇದೆ." ಎಂದು ಕೂಗಿ ಹೇಳಿದನು ಚಿಕ್ಕ ಶಿಷ್ಯ.

ಭೈರವ ಬೈರಾಗಿ ಉತ್ಸಾಹದಿಂದ ಎದ್ದು ಅಲ್ಲಿಗೆ ಬಂದು, "ಎಲೈ, ಶಿಷ್ಯೋಪಶಿಷ್ಯರೇ! ಅದೃಷ್ಟ ವಶಾತ್ ನಮಗೆ ನಿಧಿ ದೊರಕಿದರೆ ಪ್ರಸ್ತುತ ನಾವು ಅಷ್ಟರಿಂದಲೇ ತೃಪ್ತಿಪಡೋಣ. ಈ ಮಂತ್ರದಂಡವನ್ನು ರಾಜನಿಗೆ ಕೊಡಬೇಕೋ ಬೇಡವೋ ಆ ಮೇಲೆ ಸಾವಧಾನವಾಗಿ ಆಲೋಚಿಸಿದರಾಯಿತು. ಅಷ್ಟರೊಳಗೆ ಈ ಮಂತ್ರದಂಡದ ಪೂರ್ತಿ ಮಹತ್ವ ತಿಳಿದರೂ ತಿಳಿದೀತು." ಎಂದು ಹೇಳಿ ಶಿಷ್ಯನ ಹಿಂದೆಯೇ ಸುರಂಗದೊಳಗೆ ಇಳಿಯುತ್ತ, ಮೇಲಿರುವ ಶಿಷ್ಯನನ್ನು ಕೂಡಾ ಇಳಿಯುವಂತೆ ಹೇಳಿದನು.

ಗುರು ಶಿಷ್ಯರು ಕೆಳಗಿರುವ ಮೆಟ್ಟಿಲುಗಳಲ್ಲಿ ತಡವಿ ತಡವಿ ಇಳಿಯುತ್ತ ಹೋಗಲು, ಆ ಪ್ರದೇಶವೆಲ್ಲ ಜಲಮಯವಾಗಿರುವುದೆಂದು ತಿಳಿಯಿತು. ನೀರಿನ ಆಳ ಎಷ್ಟಿರಬಹುದೆಂದು ಕಾಲು ಇಳಿಬಿಟ್ಟು ನೋಡಿದರು. ಮೊಣಕಾಲಿನಷ್ಟೇ ಇದ್ದುದರಿಂದ ಮೆಲ್ಲಗೆ ಕಾಲೆಳೆಯುತ್ತ ಮೂವರೂ ಮುಂದೆ ನಡೆದರು. ಆಗ ಆ ಸುರಂಗ ಮಾರ್ಗದಲ್ಲಿ ತುಸು ದೂರ ಬೆಳಕು ಕಾಣಿಸ ತೊಡಗಿತು.

ಅದನ್ನು ನೋಡಿ ಭೈರವ ಬೈರಾಗಿ ಅತ್ಯಾನಂದದ ಧ್ವನಿ ಯೆಬ್ಬಿಸಿ, ತನ್ನ ಶಿಷ್ಯರೊಂದಿಗೆ "ಅದೋದೋ, ಆ ಬೆಳಕು ಬೇರೇನೂ ಅಲ್ಲ. ನಿಧಿ ನಿಕ್ಷೇಪಗಳಲ್ಲಿರುವ ಮಣಿ ಮಾಣಿಕ್ಯಗಳು ಹಾಗೆ ಧಗಧಗ ಕಾಂತಿ ಬೀರುತ್ತಿವೆ. ಆದರೆ ಎಚ್ಚರ ಬೇಕಪ್ಪಾ! ಅಲ್ಲಿ ಒಂದು ವೇಳೆ ನಿಧಿಯನ್ನು ಕಾಪಾಡುತ್ತ ಯಾವ ಯಕ್ಷನಾದರೂ ಇರಬಹುದು. ಅವನು ನಮ್ಮನ್ನು ತಡೆದರೆ ನಾವೇನು ಮಾಡಬೇಕು? ನಿಮ್ಮ ಉಪಾಯವೇನು?" ಎಂದು ಕೇಳಿದನು.

"ಆ ಸಂಗತಿ ಗುರುವಾದ ನೀವೇ ನಮಗೆ ಹೇಳಬೇಕು. ನಮಗೇನು ಗೊತ್ತಿದೆ?" ಎಂದನು ದೊಡ್ಡ ಶಿಷ್ಯ.

ಚಿಕ್ಕ ಶಿಷ್ಯನು ಅವಹೇಳನೆ ಮಾಡುವವನಂತೆ ನೇಗಾಡುತ್ತ, "ಎಲೋ ಅಣ್ಣ ಶಿಷ್ಯಾ, ನಿನಗೆ ಗುರುಗಳು ಕಲಿಸಿಕೊಟ್ಟ ಮಂತ್ರಗಳೇನೋ ಬಾಯಿಗೆ ಬಂದರೂ ಲೋಕಜ್ಞಾನ ಸಾಸಿವೆ ಕಾಳಿನಷ್ಟೂ ಇಲ್ಲ. ನಮಗೆ ನಿಧಿಯನ್ನು ತೋರಿಸಿದ ಈ ಮಂತ್ರದಂಡವು, ಎಂತಹ ಅದ್ಭುತ ಶಕ್ತಿಯುಳ್ಳದ್ದೆಂದು ಸ್ವಲ್ಪ ಆಲೋಚನೆ ಮಾಡಿ ನೋಡು. ಆ ನಿಧಿಯನ್ನು ಕಾಯುವ ಯಕ್ಷನ ತೊಡೆಗೆ ಈ ಮಂತ್ರದಂಡವನ್ನು ತಾಗಿಸಿದೆವೆಂದರೆ, ಅವನು ಪಟಾಕಿಯ ಹಾಗೆ ಸಿಡಿದು ಹೋಗುತ್ತಾನೆ!" ಎಂದು ಇನ್ನಿಷ್ಟು ನಕ್ಕನು.

"ಚೆನ್ನಾಗಿ ಹೇಳಿದೆ ಉಪಶಿಷ್ಯಾ! ಧೈರ್ಯವೆಂದರೆ ನಿನ್ನದೇ. ನನ್ನ ಮಂತ್ರಗಳ ಬೋಧನೆ ನಿನ್ನ ಮೈಗೆ ಚೆನ್ನಾಗಿ ಹತ್ತಿಕೊಂಡಿದೆ. ಸರಿ. ಇನ್ನು ಮಾತಾಡದೆ ನಿಃಶಬ್ದವಾಗಿ ಮುಂದಕ್ಕೆ ನಡೆಯಿರಿ!" ಎಂದನು ಭೈರವ ಬೈರಾಗಿ. ನಡೆಯುವಾಗ ಯಾವ ಸ್ಪರ್ಶವಾದರೂ ಮೊದಲು ಮಂತ್ರದಂಡಕ್ಕೇ ಆಗುವಂತೆ ಭೈರವ ಬೈರಾಗಿ ಆ ದಂಡವನ್ನು ಚಾಚಿ ಹಿಡಿದಿದ್ದನು.

ಅಷ್ಟರಲ್ಲಿ ಅವರಿಗೆ ಮೇಲಿನಿಂದ ಭೂಕಂಪವಾಗುವಂತಹ ಧ್ವನಿಯೂ, ಆನೆಯ ಘೀಂಕಾರವೂ ಕೇಳಿಸಿತು. ಮೂವರೂ ಕೆಲವು ಕ್ಷಣಗಳವರೆಗೆ ಹೆದರಿ ಸುಮ್ಮನೆ ನಿಂತರು. ಆ ಮೇಲೆ ಭೈರವ ಬೈರಾಗಿ ಧೈರ್ಯ ತಂದುಕೊಂಡು, "ಎಲೋ ಶಿಷ್ಯರೇ, ನಮ್ಮ ಆಲದ ಮರದ ಕೆಳಕ್ಕೆ ಕಾಡಾನೆಗಳೋ, ಗಜ ಸೈನಿಕರೋ, ಬಂದಹಾಗಿದೆ. ಅವರು ನಮ್ಮ ರಹಸ್ಯ ಸುರಂಗ ಮಾರ್ಗವನ್ನು ಗುರುತಿಸಿ, ಒಳಗೆ ಇಳಿದು ಗಿಳಿದು ಬಂದರೆ ನಾವೇನು ಮಾಡುವುದು?" ಎಂದನು.

"ಏನು ಮಾಡಬೇಕೆಂದು ಗುರುಗಳಾದ ನೀವೇ ಹೇಳಬೇಕು. ನಮಗೇನು ಗೊತ್ತಿದೆ ಮಣ್ಣು?" ಎಂದನು ದೊಡ್ಡ ಶಿಷ್ಯ.

ಚಿಕ್ಕ ಶಿಷ್ಯನು ಕಿಸಕ್ಕನೆ ನಗುತ್ತ, "ಕಾಡು ಮೃಗಗಳಿಗೂ, ಗಜ ಸೈನಿಕರಿಗೂ ನೆಲವನ್ನು ಪರೀಕ್ಷೆ



ಮಾಡುತ್ತ ತಿರುಗುವುದೇ ಕೆಲಸವೋ? ಅವರಿಗೆ ಬೇರೆ ಕೆಲಸವಿಲ್ಲವೆಂದುಕೊಂಡಿರೇನು? ನಾವೀಗ ಅಲ್ಲಿ ಕಾಣುವ ರತ್ನ ರಾಶಿಗಳ ಹೊರತು ಬೇರೆ ಯಾವುದನ್ನೂ ಆಲೋಚಿಸಬಾರದು. ಇದಕ್ಕಲ್ಲವೇ ದೃಢ ದೀಕ್ಷೆ ಅನ್ನುವುದು? ಇಂಥಾದ್ದೆಲ್ಲಾ ಸಿದ್ಧಿಯಾಗಲಿಕ್ಕೆ ದೀಕ್ಷೆಯೇ ಮುಖ್ಯ!" ಎಂದನು.

ಭೈರವಗುರು "ನಿಜ ನಿಜ" ಎನ್ನುವಾಗಲೇ, ಮೇಲು ಭಾಗದಿಂದ ದೊಡ್ಡದೊಂದು ಮಣ್ಣಿನ ಹೆಂಟೆ ದಭೀಲನೆ ಅವರ ಮುಂದೆ ಬಿದ್ದಿತು. ಮತ್ತೆ ಗುರು ಶಿಷ್ಯರು ಭಯಕಂಪಿತರಾಗಿ, ಸಣ್ಣದನಿಯಿಂದ ಅರಚುತ್ತ ಸುರಂಗಮಾರ್ಗದಲ್ಲಿ ಮುಂದಕ್ಕೆ ಓಡತೊಡಗಿದರು. ಅಲ್ಲಿ ನೀರು ಕ್ರಮೇಣ ಕಡಿಮೆಯಾಯಿತು.

ಆ ಸುರಂಗದ ಮೇಲಿನ ನೆಲದಲ್ಲಿ ಕೆರೆಕಟ್ಟೆಯ ಹತ್ತಿರ ಗುಡಾರಗಳನ್ನು ನಿರ್ಮಿಸಲು, ಕಟುಕಕರಡಿಯವನೂ, ಆಟವಿಕನೂ ಒಳ್ಳೆಯ ಸ್ಥಳವನ್ನು

ಹುಡುಕುತ್ತ, ಆನೆಯ ಮೇಲೆ ಬರುತ್ತಿದ್ದರು. ಆಗ ತಾವು ಏರಿಕೊಂಡಿದ್ದ ಆನೆಯ ಕಾಲೊಂದು ಭೂಮಿಯಲ್ಲಿ ಸ್ವಲ್ಪ ಇಳಿದುಹೋಗಿ, ಅದು ಹೆದರಿ ಘೀಂಕರಿಸುತ್ತ ಮುಗ್ಗುರಿಸಿ ಬೀಳುವುದನ್ನು ನೋಡಿ ಅದರ ಮೇಲೆ ಕುಳಿತಿದ್ದವರು ಕೆಳಗೆ ಹಾರಿಕೊಂಡರು. ಬಿದ್ದ ಆನೆ ಸೊಂಡಿಲಿನಿಂದ ನೆಲಕ್ಕೆ ಗಟ್ಟಿಯಾಗಿ ಹೊಡೆಯುತ್ತಾ ಮೇಲೆದ್ದು ನಿಂತಿತು.

ಕಟುಕಕರಡಿಯವನು ಸುತ್ತಲೂ ತಲೆ ತಿರುಗಿಸಿ ನೋಡಿ, ಆಟವಿಕನೊಂದಿಗೆ, "ನಮ್ಮ ಕಾಳೀವರ್ಮ ದೊರೆಯೂ, ಕೆಂಗಣ್ಣಮಾಂತ್ರಿಕರೂ ಬಂದು ಈ ಪ್ರದೇಶವನ್ನು ನೋಡಿದರೆ ಚೆನ್ನಾಗಿತ್ತು, ಪಕ್ಕದಲ್ಲೇ ಕೆರೆಯಿದೆ. ಇಲ್ಲಿ ನೀರಿಗೇನೂ ಕೊರತೆಯಿಲ್ಲ. ನಾವು ಹಿಡಿಯಬೇಕಾದ ಜಿತಕೇತು ರಾಜನ ಕೋಟೆ ಕೂಡಾ ಹತ್ತಿರದಲ್ಲೇ ಇದೆ. ಎಷ್ಟೇ ಮಂತ್ರ ತಂತ್ರ ಬಲ್ಲವನಾದರೂ ಆ ಮಾಯಾಮರ್ಕಟನು ತನ್ನ ಕೋತಿಯ ಸ್ವಭಾವದಿಂದ ಈ ಆಲದ ಮರದ ಕಡೆಗೆ ಬಂದನಾದರೆ, ಅವನನ್ನು ಸುಲಭವಾಗಿ ಹಿಡಿದು, ನಮ್ಮ ಮಹಾ ಮಾಂತ್ರಿಕ ಗುರುಗಳ ಮಂತ್ರದಂಡದ ವಿಷಯ ತಿಳಿದುಕೊಳ್ಳಬಹುದಿತ್ತು" ಎಂದನು.

ಆದರೆ ಆಟವಿಕನು ಕರಡಿಕಟುಕನು ಹೇಳಿದ ಮಾತಿಗೆ ಲಕ್ಷ್ಯವನ್ನೇ ಕೊಡಲಿಲ್ಲ. ಅವನು ಆನೆಯ ಕಾಲು ಮುರಿದು ಗಿರಿದು ಹೋಯಿತೇನೋ ಎಂದು ಪರೀಕ್ಷಿಸುವುದರಲ್ಲಿ ಮಗ್ನನಾದನು. ನೋವು ಗೀವು ಆಗಿ ಅದು ಸರಿಯಾಗಿ ನಡೆಯುವುದೋ ಇಲ್ಲವೋ ಎಂಬ ಸಂದೇಹದಿಂದ, ಅದನ್ನು ಆಚೆಗೂ ಈಚೆಗೂ ನಡೆಯಿಸಿದನು. ಅದು ಸ್ವಲ್ಪವೂ ಕುಂಟದೆ ನಡೆಯುವುದನ್ನು ನೋಡಿ, ತೃಪ್ತಿಯಿಂದ ಕಟುಕಕರಡಿಯುವನೊಂದಿಗೆ, "ಓಯ್, ಭಲ್ಲೂಕ ದೊರೆಗಳೇ, ನಮ್ಮ ವಾಹನದ ಕಾಲಿಗೆ ಏನೂ ಊನವಾಗಲಿಲ್ಲ. ನಮ್ಮ ಅದೃಷ್ಟ!" ಎಂದನು.

ಆ ಸಮಯದಲ್ಲಿ ಆಲದ ಮರದ ಕೊಂಬೆಯಿಂದ ಒಬ್ಬ ಬೇಡನು ಕೆಳಕ್ಕೆ ಹಾರುತ್ತ, "ನಿಮ್ಮ ಪುಣ್ಯಾನ್ನಿ! ಕಳ್ಳ ಬೈರಾಗಿಗಳನ್ನು ನುಂಗಿದ ಭೂಸುರಂಗದ ಬಾಯಿಯ ಕಡೆಗೆ ನಿಮ್ಮ ಆನೆ ಹೋಗದಿದ್ದುದು ನಿಮ್ಮ ದೊಡ್ಡ ಪುಣ್ಯ! ಅದು ಅಲ್ಲಿ ಕಾಲಿಟ್ಟಿದ್ದರೆ ಆ ಸುರಂಗವು ನಿಮ್ಮನ್ನೂ ನಿಮ್ಮ ಆನೆಯನ್ನೂ ಬೈರಾಗಿಗಳನ್ನು ನುಂಗಿದ ಹಾಗೇ ನುಂಗಿ ಮಾಯ ಮಾಡಿಬಿಡುತ್ತಿತ್ತು, ಗೊತ್ತಾ!" ಎಂದನು.

ಅಕಸ್ಮಾತ್ತಾಗಿ ಅವನನ್ನು ನೋಡಿ ಕಟುಕಕರಡಿಯವನು "ಹೇ! ಶಿರೀಷವನ ಭೈರವಾ! ಯಾರೋ ನೀನು! ಕಳ್ಳ ಮಾಯಾಮರ್ಕಟನ ಶಿಷ್ಯನೇನೋ! ನಿಜ ಹೇಳು!" ಎಂದು ಕೂಗುತ್ತ ಚಪಗೊಡಲಿಯನ್ನೆತ್ತಿ ಆ ಬೇಡನ ಕಡೆಗೆ ಹೋದನು.

—(ಇನ್ನೂ ಇದೆ)





# ರುಜುವಾಗದುದು

ನಾನೋ ನೀನೋ ನೋಡದೆಬಿಡಲಾರೆನೆಂಬ ಹಟದಿಂದ ರಾಜಾ ತ್ರಿವಿಕ್ರಮನು ಮರದ ಬಳಿಗೆ ತಿರುಗಿ ಹೋಗಿ, ಕೊಂಬೆಯಲ್ಲಿ ನೇತಾಡುತ್ತಿದ್ದ ಶವವನ್ನು ಕೆಳಗಿಳಿಸಿ, ತನ್ನ ಹೆಗಲ ಮೇಲೆ ಹೊತ್ತುಕೊಂಡು ಎಂದಿನಂತೆ ಮೌನಮುದ್ರೆಯಿಂದ ಸ್ಮಶಾನದ ಕಡೆಗೆ ನಡೆಯ ತೊಡಗಿದನು. ಆಗ ಶವವನ್ನಾಕ್ರಮಿಸಿಕೊಂಡ ಬೇತಾಳವು ಮಾತಾಡಲು ಪ್ರಾರಂಭಿಸಿ, "ಎಲೈ ಮಹಾರಾಜನೇ, ನೀನು ಯಾವ ನೀತಿ ನಿಯಮಗಳಿಗೆ ಕಟ್ಟುಪಟ್ಟು ಹೀಗೆ ಒದ್ದಾಡುತ್ತಿರುವಿಯೋ ನನಗಂತೂ ಗೊತ್ತಾಗುವುದಿಲ್ಲ. ಅಸಲು ಈ ಲೋಕದಲ್ಲಿ ನೀತಿಯೇ ಜಯಿಸುವುದೆಂದೂ, ಅವಿನೀತಿಗೆ ಶಿಕ್ಷೆ ತಪ್ಪಲಾರದೆಂದೂ ಖಂಡಿತವಾಗಿ ಹೇಳಲು ಸಾಧ್ಯವೂ ಇಲ್ಲ. ಇದಕ್ಕೆ ನಿದರ್ಶನವಾಗಿ ನಿನಗೆ ಗಿರಿಧರನೆಂಬವನ ಕಥೆ ಹೇಳುತ್ತೇನೆ, ಕೇಳು. ನಿನಗೆ ನನ್ನನ್ನು ಹೊತ್ತು ಹೊತ್ತು ಆಗುವ ದಾರಿಯ ಶ್ರಮವಾದರೂ ...ರಲಿ" ಎಂದು ಕಥೆಯನ್ನು ಪ್ರಾರಂಭಿಸಿತು:

...ದು ನಡೆದು ಅನೇಕ ವರ್ಷಗಳಾದುವು. ಆಗ ಹರಿಪ್ರಸಾದನೆಂಬವನು ಮೂರಾರು ಗ್ರಾಮಗಳಿಗೆ ಜಮೀನ್ದಾರನಾಗಿದ್ದನು, ಅವನ ಜಮೀನ್ದಾರೀ ವ್ಯವ

## ಬೇತಾಳಕಥೆಗಳು



ಹಾರಗಳೆಲ್ಲವನ್ನೂ ಗಿರಿಧರನೆಂಬ ಸಮರ್ಥನಾದ ಉದ್ಯೋಗಸ್ಥನೊಬ್ಬನು ನೋಡಿಕೊಳ್ಳುತ್ತಿದ್ದನು. ಅವನು ಒಳ್ಳೆಯ ಗುಣದವನಾಗಿ, ಜಮೀನ್ದಾರನ ವಿಶ್ವಾಸಕ್ಕೂ ಪಾತ್ರನಾಗಿದ್ದನು. ಅವನು ಹೇಳುವ ಆಲೋಚನೆಗಳನ್ನು ಜಮೀನ್ದಾರನು ಪ್ರತಿ ಹೇಳದೆ ಸ್ವೀಕರಿಸುತ್ತಿದ್ದನೆಂದರೆ, ಅವನ ಮೇಲೆ ಜಮೀನ್ದಾರನಿಗೆ ಎಷ್ಟು ನಂಬುಗೆ ಇದೆ ಎಂಬುದು ಗೊತ್ತಾಗುತ್ತದೆ.

ಗಿರಿಧರನ ಪ್ರಭಾವ ಎಷ್ಟೆಂಬುದು ಆ ಗ್ರಾಮಗಳ ನಿವಾಸಿಗಳಿಗೆಲ್ಲಾ ಗೊತ್ತಾಗಿತ್ತು, ಅಂತಲೇ ಆ ಮೂರು ಗ್ರಾಮಗಳಲ್ಲಿಯೂ ಯಾರಿಗೆ ಏನು ಬೇಕಾದರೂ, ಗಿರಿಧರನಿಗೆ ಒಂದು ಡೊಗ್ಗು ನಮಸ್ಕಾರ ಹಾಕಿ ತಮ್ಮ ಕೆಲಸಮಾಡಿಸಿಕೊಳ್ಳುತ್ತಿದ್ದರು. ಕ್ರಮವಾಗಿ ಜನಸಂಖ್ಯೆ ಹೆಚ್ಚಾಗಿ, ಊರುಗಳು ದೊಡ್ಡದಾದುವು. ಅದರೊಂದಿಗೆ ನಮಸ್ಕಾರ ಮಾಡುವವರ ಸಂಖ್ಯೆ ಕೂಡಾ ಹೆಚ್ಚಾಯಿತು. ಒಂದೇ ಬಗೆಯ ಸಹಾಯವು ಇಬ್ಬರು ಮೂವರಿಗೆ ಬೇಕಾಗಿ ಬಂದಾಗ, ಅವರಲ್ಲಿ ಸ್ಪರ್ಧೆಗಳುಂಟಾಗ ತೊಡಗಿದುವು. ನಮಸ್ಕಾರ ಮಾಡುವವರನ್ನು ಸೋಲಿಸಲು, ಕೆಲವರು ಹಣ್ಣುಗಳ ಬುಟ್ಟಿಗಳನ್ನು ತರಲು ತೊಡಗಿದರು. ಗಿರಿಧರನು ಸಹಜವಾಗಿಯೇ ಬರಿಯ ನಮಸ್ಕಾರ ತರುವವರನ್ನು ಬದಿಗೆ ಸರಿಸಿ, ಹಣ್ಣಿನ ಬುಟ್ಟಿಗಳ ಭಾರದೊಂದಿಗೆ ಬಂದವರ ಮೇಲೆ ಹೆಚ್ಚಿನ ಶ್ರದ್ಧೆ ತೋರಿಸಲೇ ಬೇಕಾಯಿತು.

ಕೆಲಸ ಸಾಧಿಸಿಕೊಳ್ಳುವವರ ಸ್ಪರ್ಧೆ ಇನ್ನಷ್ಟು ಹೆಚ್ಚಾಯಿತು, ಹಣ್ಣು ಬುಟ್ಟಿಗಳ ಮೇಲೆ ರೂಪಾಯಿ ಚೀಲಗಳೂ ಏರಿ ಬರತೊಡಗಿದುವು. ಕೇಳದೆಯೇ ತನ್ನ ಮನೆಗೆ ಹಣವು ನಡೆದು ಬರುವಾಗ, ಅದನ್ನು ಬದಿಗೆ ಸರಿಸುವುದರಲ್ಲಿ ಯಾವ ಅರ್ಥವೂ ಇಲ್ಲ ವೆನಿಸಿತು ಗಿರಿಧರನಿಗೆ.

ದೇವಾಲಯದ ಅರ್ಚಕನ ಉದ್ಯೋಗವಿರಲಿ, ಶಾಲಾಮಾಸ್ತರನ ಕೆಲಸವೇ ಇರಲಿ, ಪರ್ಯವೇಕ್ಷಕ, ಗಣಕ, ಗುಮಾಸ್ತ ಮುಂತಾದ ಯಾವ ಕೆಲಸವೇ ಇರಲಿ, ಹಣದೊಂದಿಗೆ ಬಂದವನಿಗೇ ದಕ್ಕ ತೊಡಗಿತು. ಹೀಗಾದುದರಿಂದ ಗಿರಿಧರನ ಹೆಂಡತಿಯ ಶರೀರದ ತುಂಬಾ ಹೊರಲಾರದಷ್ಟು ನಗನಟ್ಟುಗಳೂ, ಮನೆ ಯೊಳಗೆ ಅಪರಿಮಿತ ಅಲಂಕಾರದ ವಸ್ತುಸಾಮಗ್ರಿ ಗಳೂ ತುಂಬ ತೊಡಗಿದುವು.

ಇದರ ಫಲಿತವಾಗಿ ಹರಿಪ್ರಸಾದ ಜಮೀನ್ದಾರೀ ರಾಜ್ಯದಲ್ಲಿ ಲಂಚ ಕೊಡುವವನಿಗೆ ಹೊರತು, ನಿಜ ವಾದ ಅರ್ಹತೆಗಳಿರುವ ಬಡ ಜನರಿಗೆ ಬದುಕುವ ದಾರಿ ಲಭಿಸುವುದಿಲ್ಲವೆಂದು ಜನರು ಹಿಂದಿನಿಂದ ಮಾತಾಡಿಕೊಳ್ಳ ತೊಡಗಿದರು.

ಶೇಷಗಿರಿ ಎಂಬ ಬಡವನು ಸ್ವತಃ ಅನುಭವ ಗೊಂಡು ಆ ನಿಜವನ್ನು ತಿಳಿದುಕೊಂಡನು. ಅವನು ತುಂಬಾ ಬಡವನಾದುದರಿಂದ, ವಾರದ ಮನೆಗಳನ್ನು ಏರ್ಪಡಿಸಿಕೊಂಡು ಕಷ್ಟಪಟ್ಟು ಓದಿ ಬಹಳ ಬುದ್ಧಿ ವಂತನಾದವನು. ಅವನು ಗಿರಿಧರನಿಗೆ ಕೈನೋವಾಗು

ವಷ್ಟು ನಮಸ್ಕಾರಗಳನ್ನು ಮಾಡಿ ಮಾಡಿ ನೊಂದು ಕೊಂಡನು. ಆದರೆ ಒಂದೇ ಒಂದು ಹಣ್ಣಿನ ಬುಟ್ಟಿ ಕೂಡಾ ತರಲಾರದೆ ಹೋದನು.

ಆದುದರಿಂದ ಅವನಿಗೆ ಯಾವ ಉದ್ಯೋಗವೂ ಸಿಗಲಿಲ್ಲ. ತನ್ನ ವಿನಯ ವಿಧೇಯತೆಗಳ ನಮಸ್ಕಾರದ ಬಾಣಗಳು ಗಿರಿಧರನಲ್ಲಿ ಯಾವ ಭಾವನೆಯನ್ನೂ ಬರಿಸಲಿಲ್ಲವೆಂದು ತಿಳಿದು ಶೇಷಗಿರಿಯ ಮನಸ್ಸಿನಲ್ಲಿ ಕೋಪಾವೇಶವೇಳ ತೊಡಗಿತು.

ಕಡೆಗೆ ಅವನು ನೇರಾಗಿ ಜಮೀನ್ದಾರನ ಮನೆಗೆ ಹೋಗಿ ಹರಿಪ್ರಸಾದನ ದರ್ಶನಮಾಡಿ, "ಸ್ವಾಮಿ, ನಿಮ್ಮ ಜಮೀನ್ದಾರೀ ವ್ಯವಹಾರಗಳು ಒಂದಿಷ್ಟೂ ಚೆನ್ನಾಗಿಲ್ಲ. ನಿಮ್ಮ ಪ್ರತಿನಿಧಿಗಳಂತಹವರಿಗೆ ಲಂಚ ಕೊಟ್ಟರೆ ತೀರಿತು. ಯಾವುದಕ್ಕೂ ಉಪಯೋಗ ವಿಲ್ಲದವನಿಗಾದರೂ ಕೆಲಸ ಸಿಕ್ಕಿಬಿಡುತ್ತದೆ. ವಿದ್ಯಾ ಬುದ್ಧಿಗಳಿರುವ ಬಡಜನರು ಮೇಲೆ ಕೆಳಗೆ ನೋಡ ಬೇಕಾದ ಪರಿಸ್ಥಿತಿ ಬಂತು. ಇದನ್ನು ನಿಮ್ಮ ಗಮನಕ್ಕೆ ತರುವವರೇ ಇಲ್ಲದಂತಾಗಿದೆ. ಏಕೆಂದರೆ ಎಲ್ಲರಿಗೂ ನಿಮ್ಮ ವಿಶ್ವಾಸದವರ ಮೇಲೆ ಭಯ! ಆದುದರಿಂದ ತಾವು ದಯಮಾಡಿ ಪರೀಕ್ಷಿಸಿ ನೋಡಿದರೆ ನಾನು ಹೇಳಿದುದು ನಿಜವೋ ಸುಳ್ಳೋ ತಿಳಿದುಕೊಳ್ಳ ಬಹುದು." ಎಂದು ಗಿರಿಧರನ ಮೇಲೆ ಫಿರ್ಯಾದಿ ಮಾಡಿದನು.

ಇದನ್ನು ತಿಳಿದು ಜಮೀನ್ದಾರನಿಗಾದ ಆಶ್ಚರ್ಯಕ್ಕೆ ಮೇರೆ ಇರಲಿಲ್ಲ. ಗಿರಿಧರನ ಮೇಲೆ ಅವನಿಗೆ ಅಷ್ಟೊಂದು ವಿಶ್ವಾಸ! ಗಿರಿಧರನು ಎಷ್ಟೋ ಬಡವ ರನ್ನು ನೋಡಿ ಕನಿಕರಪಟ್ಟು ತನ್ನ ಹತ್ತಿರ ಹೇಳಿ ಅವರಿಗೆಲ್ಲ ಬಂಜರು ಭೂಮಿಯನ್ನು ಕೊಡಿಸಿದ್ದಾನೆ. ಯಾರೊಬ್ಬರೂ ಗಿರಿಧರನ ಮೇಲೆ ಈವರೆಗೂ ದೂರು ತಂದವರಿಲ್ಲ.

ಶೇಷಗಿರಿಯ ಮಾತನ್ನು ನಂಬಲಾಗದೆ ಜಮೀ ನ್ದಾರನು, "ಆಗಲಿ, ನೋಡುತ್ತೇನೆ. ನೋಡಪ್ಪ, ನೀನು ಹೇಳುವ ಮಾತು ನಿಜವೇ ಆದರೆ ಗಿರಿಧರನ ಉದ್ಯೋಗವನ್ನು ನಿನಗೇ ಕೊಡುತ್ತೇನೆ" ಎಂದು ಹೇಳಿ ಅವನನ್ನು ಕಳುಹಿಸಿದನು.





ತರುವಾಯ ಜಮೀನ್ದಾರನು ಒಬ್ಬಾನೊಬ್ಬ ಬಡ ಯಾಚಕ ಬ್ರಾಹ್ಮಣನನ್ನು ಕರೆದುಕೊಂಡು ಬಂದು, ಅವನ ಕೈಗೆ ನೂರು ರೂಪಾಯಿಯ ಚೀಲವನ್ನು ಕೊಟ್ಟು, "ಹೊಸದಾಗಿ ಕಟ್ಟಿ ಮುಗಿಸಿದ ಕೆರೇ ಗಣಪತಿ ಗುಡಿಯ ಗ್ರಾಮದಲ್ಲಿರುವ ಗಿರಿಧರನ ಮನೆಗೆ ಹೋಗಿ, ಈ ನೂರು ರೂಪಾಯಿಯನ್ನು ಅವನಿಗೆ ಕೊಟ್ಟು, ಹೊಸ ಗುಡಿಯ ಅರ್ಚಕನ ಕೆಲಸ ಕೊಡಿಸಬೇಕೆಂದು ಕೇಳಿರಿ" ಎಂದು ಹೇಳಿ ಕಳುಹಿಸಿದನು. ಆ ಮೇಲೆ ಪೂಜೆಮಾಡುವುದರಲ್ಲಿ ಒಳ್ಳೆಯ ಅನುಭವವಿರುವ ಮತ್ತೊಬ್ಬ ಬ್ರಾಹ್ಮಣನನ್ನು ಕರೆಯಿಸಿ, "ನೀವು ನಮ್ಮ ಗಿರಿಧರನಿರುವ ಗ್ರಾಮಕ್ಕೆ ಹೋಗಿ, ಅವನಿಗೆ ನಮಸ್ಕಾರಮಾಡಿ, ಹೊಸ ದೇವಾಲಯದ ಅರ್ಚಕನ ಕೆಲಸ ನಿಮಗೆ ಕೊಡಿಸಬೇಕೆಂದು ಕೇಳಿರಿ" ಎಂದು ಹೇಳಿ ಕಳುಹಿಸಿದನು.

ಇಬ್ಬರು ಬ್ರಾಹ್ಮಣರು ಹೆಚ್ಚು ಕಡಿಮೆ ಒಂದೇ ಸಮಯಕ್ಕೆ ಗಿರಿಧರನ ಮನೆಗೆ ಹೋದರು. ಯಾಚಕ ಬ್ರಾಹ್ಮಣನು ರೂಪಾಯಿ ಚೀಲ ಹಿಡಿದುಕೊಂಡು ಕುಳಿತುಕೊಂಡಿದ್ದನು. ಆದರೂ ಎರಡನೇ ಬ್ರಾಹ್ಮಣನು ತನ್ನ ಚಿಕ್ಕಂದಿನ ಮಿತ್ರನಾದುದರಿಂದ, ಗಿರಿಧರನು ಅವನೊಂದಿಗೆ ಬಹಳ ಹೊತ್ತು ಅದೂ ಇದೂ ಮಾತಾಡುತ್ತ, ಅವನು ಬಂದ ಕೆಲಸವನ್ನು ತಿಳಿದುಕೊಂಡು, "ಈ ದೇವಾಲಯವು ನಮ್ಮ ಜಮೀನ್ದಾರರು ಕಟ್ಟಿಸಿದ್ದೇ. ನಿಮ್ಮಂತಹ ಅನುಭವಸ್ಥರನ್ನು ಅರ್ಚಕರಾಗಿ ನಿಯಮಿಸಲು ಜಮೀನ್ದಾರರು ಏಕೆ ಅಭ್ಯಂತರ ಹೇಳುತ್ತಾರೆ? ಹಾಗೆಯೇ ಮಾಡಿಸುತ್ತೇನೆ, ಬಿಡಿ" ಎಂದನು.

ಯಾಚಕ ಬ್ರಾಹ್ಮಣನು ಕೂಡಾ ಅದೇ ಕೆಲಸದ ಮೇಲೆ ಬಂದಿದ್ದಾನೆಂದು ತಿಳಿದು ಗಿರಿಧರನು, "ಯಾವುದೋ ಮನೆ ಪೂಜೆ ಮಾತ್ರ ಮಾಡಿಕೊಂಡು ಮನೆ ಮನೆ ತಿರುಗುವ ನಿಮಗೆ ದೇವಾಲಯದ ಪೂಜಾಕ್ರಮ ಏನು ಗೊತ್ತಿದೆ? ಹೋಗಿ ಹೋಗಿ!" ಎಂದನು.

ಅನಂತರ ಗಿರಿಧರನು ತನ್ನ ಚಿಕ್ಕಂದಿನ ಸ್ನೇಹಿತ ಬ್ರಾಹ್ಮಣನನ್ನು ಹೊಸ ದೇವಾಲಯಕ್ಕೆ ಅರ್ಚಕನಾಗಿ ನಿಯಮಿಸಬೇಕೆಂದು ಜಮೀನ್ದಾರನಿಗೆ ಆಲೋಚನೆ ಹೇಳಿದನು. ಇಷ್ಟಾದ ಮೇಲೆ ಜಮೀನ್ದಾರನು ಶೇಷಗಿರಿಯನ್ನು ಬರಮಾಡಿಸಿ, "ನಾನು ಗಿರಿಧರನಿಗೆ ಪರೀಕ್ಷೆ ಇಟ್ಟೆನು. ಅವನು ಲಂಚ ಕೋರನೆಂದು ರುಜುವಾಗಲಿಲ್ಲ." ಎಂದನು.

ಶೇಷಗಿರಿ ಆ ಮಾತಿಗೆ ಒಪ್ಪದೆ, "ನಿಮ್ಮ ಪರೀಕ್ಷೆ ರುಜುವಾಗದಿರಲು ಬೇರೇನೋ ಕಾರಣವಿದ್ದೀತು. ಅಸಲು ಗಿರಿಧರರು ಲಂಚ ಕೋರರೆಂದು ಹೇಳಲು ಬೇರೆ ಪರೀಕ್ಷೆಯಾದರೂ ಏಕೆ? ಅವರ ಪತ್ನಿಯು ಶರೀರದಲ್ಲಿರುವ ಆಭರಣಗಳನ್ನು ನೋಡಿದರೇ ಸಾಕು. ಅಲಂಕಾರ ಸಾಮುಗ್ರಿಗಳ ಭಂಡಾರದಂತಹ ಅವರ ಮನೆಯನ್ನು ನೋಡಿದರೂ ಸಾಕು. ನೀವು ಕೊಡುವ ಸಂಬಳದಲ್ಲಿ ಅಷ್ಟೊಂದು ಬಂಗಾರವನ್ನೂ, ಅಷ್ಟೆಲ್ಲ

ಸಾಮಾನುಗಳನ್ನೂ ಕೊಂಡುಕೊಳ್ಳಲು ಸಾಧ್ಯವಿಲ್ಲವೆಂದು ನಿಮಗೇ ತಿಳಿಯುತ್ತದೆ" ಎಂದನು ಜಮೀನ್ದಾರನೊಂದಿಗೆ.

ಅದನ್ನೂ ನೋಡೋಣವೆಂದು ಜಮೀನ್ದಾರನು ಗ್ರಾಮಗಳ ತನಿಖೆಯ ನೆವನದಲ್ಲಿ, ಮುಂದಾಗಿ ತಿಳಿಸದೆಯೇ ಗಿರಿಧರನ ಮನೆಗೆ ಹೋಗಬೇಕೆಂದು ನಿಶ್ಚಯಿಸಿಕೊಂಡನು.

ಆದರೆ ಜಮೀನ್ದಾರನು ಹೊರಡುವುದಕ್ಕೆ ಎರಡು ದಿನಗಳ ಮೊದಲು, ಗಿರಿಧರನ ಬಾವನು ಗಿರಿಧರನ ಬಳಿಗೆ ಬಂದು, "ನಮ್ಮ ಊರಿನಲ್ಲಿ ಒಳ್ಳೆಯ ಒಂದು ಹೊಲವು ಮಾರಾಟಕ್ಕೆ ಬಂದಿದೆ. ಬೇಗನೇ ಕೊಂಡುಕೊಳ್ಳಬೇಕು. ನನ್ನ ಹತ್ತಿರ ಹಣವಿಲ್ಲ. ನೀವಾದರೂ ಕೊಂಡುಕೊಂಡುಬಿಡಿರಿ. ಬಹಳ ಒಳ್ಳೆಯ ಹೊಲ" ಎಂದನು.

ಗಿರಿಧರನು ಸ್ವಲ್ಪವೂ ಸಂಕೋಚಪಡದೆ, ತನ್ನ ಹೆಂಡತಿಯ ನಗಗಳನ್ನೆಲ್ಲಾ ತೆಗೆಯಿಸಿ, ತನ್ನ ಬಾವಯ್ಯನಿಗೆ ಕೊಟ್ಟು, "ಈ ನಗಗಳನ್ನು ಅಡವಿಟ್ಟು, ಹೊಲವನ್ನು ಕೊಂಡುಕೋ, ಆ ಮೇಲೆ ಆ ಹೊಲದಿಂದ ಬರುವ ಆದಾಯದಿಂದಲೇ ಅಡವಿನ ನಗಗಳನ್ನು ಬಿಡಿಸಿಕೊಳ್ಳಬಹುದು" ಎಂದನು. ಆ ನಗಗಳೊಂದಿಗೆ ಬಾವಯ್ಯನು ಹೊರಟುಹೋದನು.

ಅದೇ ಸಮಯದಲ್ಲಿ ಗಿರಿಧರನ ನೆರೆಮನೆಯ ಮದುವೆಯ ಗೌಜಿ. ಅವರ ಅಗತ್ಯಕ್ಕಾಗಿ ಗಿರಿಧರನು ತನ್ನ ಮನೆಯ ಸಾಮಾನುಗಳನ್ನು ಅಲ್ಲಿಗೆ ಕೈಗಡವಾಗಿ ಕಳುಹಿಸಿಬಿಟ್ಟನು.

ಅಂತಹ ಪರಿಸ್ಥಿತಿಯಲ್ಲಿ ಅಕಸ್ಮಾತ್ತಾಗಿ ಜಮೀನ್ದಾರನು ಗಿರಿಧರನ ಮನೆಗೆ ಬಂದನು. ಗಿರಿಧರನು ಒಡೆಯರನ್ನು ನೋಡಿ ಗಾಬರಿಯಾಗಿ, "ಅಯ್ಯಾ, ನಿಮ್ಮನ್ನು ಕೂಡುವಂತೆ ಹೇಳಲು ಸರಿಯಾದ ಕುರ್ಚಿ ಕೂಡಾ ಇಲ್ಲ." ಎಂದು ಒಂದು ಜಮಖಾನೆಯನ್ನು ಹಾಸಿ ಅದರ ಮೇಲೆ ಜಮೀನ್ದಾರನು ಕುಳಿತುಕೊಳ್ಳಲು ಒಂದು ಮುಕ್ಕಲಿಗೆಯನ್ನಿಟ್ಟನು.

ಗಿರಿಧರನ ಹೆಂಡತಿ, "ಒಂದು ಬೆಳ್ಳಿ ಲೋಟ ಕೂಡಾ ಇಲ್ಲವಲ್ಲಾ!" ಎನ್ನುತ್ತ, ಚೆನ್ನಾಗಿ ತಿಕ್ಕಿ





ತೊಳೆದ ಕಂಚಿನ ಲೋಟೆಯಲ್ಲಿ ಹಾಲನ್ನೂ, ಒಂದು ಪರಿವಾಣದಲ್ಲಿ ಕೆಲವು ಹಣ್ಣುಗಳನ್ನೂ ತಂದು ಜಮೀನ್ದಾರನ ಮುಂದಿಟ್ಟಳು. ಜಮೀನ್ದಾರನು ಅವಳನ್ನು ಸೂಕ್ಷ್ಮವಾಗಿಯೆ ಪರೀಕ್ಷಿಸಿ ನೋಡಿದನು. ಅವಳ ಕೊರಳಲ್ಲಿ ಮಂಗಲ ಸೂತ್ರದ ಹೊರತು ಮತ್ತೇನಿರಲಿಲ್ಲ. ಕೈಗಳಲ್ಲಿ ಗಾಜಿನ ಬಳೆಗಳು ಮಾತ್ರವೇ. ಮನೆ ಪೂರಾ ಭಣಗುಟ್ಟುವ ಹಾಗಿತ್ತು.

"ನಾನು ಹೇಳದೆ ಕೇಳದೆ ಬಂದೆನೆಂದು ಚಡಪಡಿಸ ಬೇಡ ಗಿರಿಧರಾ! ಈ ಗ್ರಾಮದಲ್ಲಿ ಒಂದು ಕೆಲಸವಿತ್ತು. ಹಾಗೆಯೇ ನಿನ್ನನ್ನೂ ಮಾತಾಡಿಸಿ ಹೋಗೋಣಾ ಅಂತ ಬಂದೆ." ಎಂದು ಹೇಳಿ ಜಮೀನ್ದಾರನು ಎದ್ದನು. ಗಿರಿಧರನು ನೊಂದುಕೊಳ್ಳುತ್ತ, "ಅಂಥ ಕೆಲಸ ಏನಾದರೂ ಇದ್ದರೆ ನನಗೆ ಸುದ್ದಿ ತಿಳಿಸಿದ್ದರೇ ಸಾಕಿತ್ತು. ನೀವೇ ಹೊರಟು ಬರಬೇಕಾಗಿದ್ದಿಲ್ಲ. ನಾನೇ ತಮ್ಮಲ್ಲಿ ಬರುವಾ ಅಂತಲೇ ಇದ್ದೆ. ಈ ನಡುವೆ ಸ್ವಲ್ಪ ತೆರಿಗೆ ವಸೂಲಾಗಿದೆ. ಇನ್ನೂ ಸ್ವಲ್ಪ ಆಗಬೇಕಾಗಿದೆ" ಎಂದು ಹೇಳಿ ಗಿರಿಧರನು ಹಣದ ಚೀಲವನ್ನು ತಂದು ಜಮೀನ್ದಾರನ ಮುಂದೆ ಇಟ್ಟನು.

ಗಿರಿಧರನು ಪರಮ ದರಿದ್ರ ಸ್ಥಿತಿಯಲ್ಲಿರುವಂತೆ ಜಮೀನ್ದಾರನಿಗೆ ನಂಬುಗೆಯಾದುದರಿಂದ. "ಗಿರಿಧರಾ, ಪ್ರಸ್ತುತ ಈ ಹಣವನ್ನು ನಿನ್ನ ಅಗತ್ಯಗಳಿಗೆ ಉಪಯೋಗಿಸಿಕೋ. ಆಮೇಲೆ ಸಾವಕಾಶವಾಗಿ ಲೆಕ್ಕ ನೋಡಿದರಾಯಿತು." ಎಂದು ಹೇಳಿ ಹಣವನ್ನು ತೆಗೆದುಕೊಳ್ಳದೆಯೇ ಹೊರಟು ಹೋದನು.

ಅನಂತರ ಜಮೀನ್ದಾರನು, ಶೇಷಗಿರಿಯನ್ನು ಕರೆಯಿಸಿ, "ನೀನು ಹೇಳಿದುದು ಒಂದೂ ರುಜುವಾಗಲಿಲ್ಲ. ಗಿರಿಧರನ ಮನೆ ದರಿದ್ರದೇವಿಯ ತೌರು ಮನೆಯ ಹಾಗಿದೆ. ಅವನ ಹೆಂಡತಿಯ ಕೊರಳಲ್ಲಿ ಮಂಗಲ ಸೂತ್ರದ ಹೊರತು ಮತ್ತೇನಿಲ್ಲ. ಅಂಥವನ ಮೇಲೆ ಇಂತಹ ಸುಳ್ಳು ದೂರನ್ನು ನೀನು ಏಕೆ ಹೇಳಿದೆಯೋ ನನಗಂತೂ ತಿಳಿಯದು. ಇನ್ನು ಹೀಗೆಲ್ಲ ಗಳಹಬೇಡ. ಬುದ್ಧಿ ತಂದುಕೋ, ಹೋಗು." ಎಂದು ನಿಂದಿಸಿ ಕಳುಹಿಸಿಬಿಟ್ಟನು.

ಜಮೀನ್ದಾರನು ಸುಳ್ಳು ಹೇಳಿದನೆಂದು ಶೇಷಗಿರಿಗೆ ತೋರಲಿಲ್ಲ. ಗಿರಿಧರನಿಗೆ ಅಂತಹ ಪರಿಸ್ಥಿತಿ ಹೇಗೆ ಬಂದಿತೆಂದು ಶೇಷಗಿರಿಗೆ ಗೊತ್ತಾಗಲಿಲ್ಲ. "ಬಹುಶಃ ಅವನನ್ನು ದೇವರೇ ಕಾಪಾಡುವುದಾಗಿರಬೇಕು. ಇಲ್ಲದಿದ್ದರೆ ಅವನನ್ನು ಲಂಚ ಕೋರನೆಂದು ರುಜುಮಾಡಿ ತೋರಿಸಲು ನನಗೆ ಸಾಧ್ಯವಾಗಲಿಲ್ಲವೆಂದರೇನಿದು?" ಎಂದು ತನ್ನ ದುರದೃಷ್ಟವನ್ನು ಹಳಿದುಕೊಂಡನು.

ಬೇತಾಳವು ಇಲ್ಲಿಗೆ ಕಥೆಯನ್ನು ಮುಗಿಸಿ, "ರಾಜಾ, ಗಿರಿಧರನು ದೈವಿಕವಾಗಿ ತನ್ನ ಅಪರಾಧವು ಹೊರಬೀಳದಂತೆ ತಪ್ಪಿಸಿಕೊಂಡ ಮಾತ್ರಕ್ಕೆ ಅವನು ಶಿಕ್ಷೆಗೆ ಅರ್ಹನಲ್ಲವೆನ್ನಬಲ್ಲೆಯಾ? ಅಂತಹವನನ್ನು ಕುರಡಾಗಿ ನಂಬುವ ಜಮೀನ್ದಾರನು ಅವಿವೇಕಿಯುಲ್ಲವೇ? ಈ ಸಂದೇಹಗಳಿಗೆ ತಕ್ಕ ಸಮಾಧಾನವು ತಿಳಿದು

ಕೂಡಾ ಹೇಳದೆ ಹೋದರೆ ನಿನ್ನ ತಲೆ ಸಾವಿರ ಹೋಳಾಗುವುದೆಂದು ತಿಳಿ!" ಎಂದಿತು.

ಆದಕ್ಕೆ ತ್ರಿವಿಕ್ರಮನು ಹೀಗೆಂದನು: "ಉದ್ಯೋಗ ಕೊಡಿಸುವುದರಲ್ಲಿ ಗಿರಿಧರನು ಅವಲಂಬಿಸಿದ ಪದ್ಧತಿ ನೀತಿಯುತವಾದುದಲ್ಲವೆಂಬುದಕ್ಕೆ ಸಂದೇಹವೇನಿಲ್ಲ. ಆದರೆ ಅವಿನೀತಿ ಎಂಬುದು ಎರಡು ವಿಧಗಳಾಗಿವೆ. ಕೆಲವರು ವ್ಯಕ್ತಿಗಳು ಸ್ವಾರ್ಥಾತಿರೇಕದಿಂದ ಸಾಮಾಜಿಕ ನೀತಿಯನ್ನು ಧಿಕ್ಕರಿಸಿ ಅಕ್ರಮವಾಗಿ ಪ್ರವರ್ತಿಸುತ್ತಾರೆ. ಅಂಥವರಿಗೆ ಅವಿನೀತಿಗೆ ತಕ್ಕುದಾದ ಶಿಕ್ಷೆ ಸಂಘ ಸಮಾಜಗಳಿಂದಲೇ ಬರುತ್ತದೆ. ಆದರೆ ಗಿರಿಧರನ ವಿಷಯದಲ್ಲಿ ಅವಿನೀತಿಗೆ ಕಾರಣವು ಸಮಾಜದೊಳಗೇ ಇದೆ. ಜಮೀನ್ದಾರರ ಉದ್ಯೋಗಸ್ಥರು ಕಾಣಿಕೆಗಳನ್ನು ಪಡೆದುಕೊಳ್ಳುವುದು ತಪ್ಪೆನ್ನುವಂತಿಲ್ಲ. ಗಿರಿಧರನು ಯಾರಿಗೆ ಉದ್ಯೋಗ ಕೊಡಿಸುವುದಾದರೂ ಲಂಚ ಬೇಕೆಂದು ನಿಯಮವಿಟ್ಟುಕೊಂಡವನಲ್ಲ. ಆದರೂ ಕಾಣಿಕೆ ಪಡೆದುಕೊಂಡ ಮೇಲೆ ಪ್ರತ್ಯುಪಕಾರ ಮಾಡಬೇಕಾಗಿ ಬಂದೇ ಬರುತ್ತದೆ. ಅವನು ಸ್ವಾರ್ಥಪರನಲ್ಲವೆಂದೂ, ಅವನಿಗೆ ಕಾಣಿಕೆ ಕೊಡುವವರು ಸ್ವತಃ ಬುದ್ಧಿಪೂರ್ವಕವಾಗಿಯೇ ಕೊಡುವವರೆಂದೂ ಸ್ಪಷ್ಟವಾಗಿದೆ. ಸಹಜವಾಗಿ ಗಿರಿಧರನು ಒಳ್ಳೆಯವನೇ, ಇನ್ನೊಬ್ಬರಿಗೆ ಸಹಾಯ ಮಾಡುವವನೇ. ಅಷ್ಟೇ ಹೊರತು ಇತರರನ್ನು ಪೀಡಿಸುವವನಲ್ಲ. ಮಾರಾಟಕ್ಕೆ ಬಂದ ಹೊಲವನ್ನು ತನ್ನ ಬಾವನು ಕೊಂಡುಕೊಳ್ಳಲಿ ಎಂದುಕೊಂಡು, ಹೆಂಡತಿಯ ನಗಗಳನ್ನೆಲ್ಲಾ ಸುಲಿದುಕೊಟ್ಟಿದ್ದಾನೆ. ಯಾರೋ ಸಂಬಂಧವಿಲ್ಲದವರ ಮನೆಗೆ ತನ್ನ ಮನೆಯ ಸಾಮಾನುಗಳನ್ನು ಸಹಾಯಕ್ಕೆ ಕೊಡುತ್ತಾನೆ. ಆದುದರಿಂದ ಅವನು ಸ್ವಂತದಲ್ಲಿ ಸ್ವಾರ್ಥಪರನೂ, ಶಿಕ್ಷೆಗೆ ಅರ್ಹನೂ ಅಲ್ಲ. ತಾನು ತುಂಬಾ ವಿಶ್ವಾಸದಿಂದ ನೋಡಿಕೊಳ್ಳುತ್ತಿದ್ದ ಗಿರಿಧರನ ಮೇಲೆ, ಫಿರ್ಯಾದಿ ಬಂದರೆ, ಅದನ್ನು ಅಲಕ್ಷ್ಯಮಾಡದೆ, ಎರಡು ಪರೀಕ್ಷೆಗಳನ್ನೂ ನಡೆಸಿದ ಜಮೀನ್ದಾರನೂ ಅವಿವೇಕಿಯಲ್ಲ. ಒಂದು ವೇಳೆ ಗಿರಿಧರನ ಐಶ್ವರ್ಯವು ಹೊರಬಿದ್ದರೂ, ಜಮೀನ್ದಾರನು ಅವನನ್ನು ಶಿಕ್ಷಿಸಲು ಅಗತ್ಯವಾದ ವಿಷಯವನ್ನು ಶೇಷಗಿರಿಯಿಂದ ರುಜು ಪಡಿಸಲು ಸಾಧ್ಯವಿಲ್ಲ. ಅದೇನೆಂದರೆ, ಗಿರಿಧರನು ಯಾರಿಗಾದರೂ ಲಂಚಕೊಟ್ಟರೇನೇ ಉದ್ಯೋಗ ಕೊಡಿಸುತ್ತಾನೆಂಬುದೇ. ಹಾಗೆ ಕೇಳುವ ಅಭ್ಯಾಸವಿರುತ್ತಿದ್ದರೆ ಗಿರಿಧರನು ಶೇಷಗಿರಿಯನ್ನೇ ಲಂಚ ಕೇಳಿರಬೇಕಿತ್ತು. ಇದರಿಂದ ಜಮೀನ್ದಾರನು ತನ್ನ ಮೇಲಿಟ್ಟ ವಿಶ್ವಾಸಕ್ಕೆ ಗಿರಿಧರನು ಅರ್ಹನೆಂದೇ ಹೇಳಬೇಕು."

ಹೀಗೆ ರಾಜನಿಗೆ ಮೌನಭಂಗವಾದ ಕೂಡಲೇ ಬೇತಾಳವು ಶವದೊಂದಿಗೆ ಮಾಯವಾಗಿ ಹೋಗಿ ಮರದಕೊಂಬೆಯನ್ನೇರಿಕೊಂಡಿತು.



# ನಿಜವಾದ ಸ್ವಪ್ನ

ಸುಬ್ಬಯ್ಯನೆಂಬವನು ಪರಮ ಲೋಭಿ. ಪ್ರಾಣ ಹೋಗುತ್ತದೆಂದರೂ ಒಂದು ಪೈಸಾ ದಾನಮಾಡಲಾರ.

ಅಂಥವನಿಗೆ ಒಂದು ಸಾರಿ ಕನಸಿನಲ್ಲಿ "ಎಲೋ ಸುಬ್ಬಯ್ಯಾ ! ನೀನು ನೂರು ರೂಪಾಯಿ ದಾನ ಮಾಡು; ಸಾವಿರ ರೂಪಾಯಿ ಲಭಿಸುತ್ತದೆ !" ಎಂಬ ಧ್ವನಿಯೊಂದು ಕೇಳಿತು.

ಸುಬ್ಬಯ್ಯ ಆ ಸ್ವಪ್ನ ಧ್ವನಿಯನ್ನು ನಂಬಿ ನೂರು ರೂಪಾಯಿಗಳಿಂದ ಬಡವರಿಗೆ ಅನ್ನಸಂತರ್ಪಣೆ ಮಾಡಿದನು.

ಆದಾದ ಮಾರಣೇ ದಿನದಲ್ಲಿ ಅವನ ದೂರದ ಬಂಧು ಯಾರೋ ತೀರಿ ಹೋದನು. ಅವನ ಪಾಲಿನ ಒಂದು ಸಾವಿರ ರೂಪಾಯಿ ಸುಬ್ಬಯ್ಯನಿಗೆ ಬಂತು. ಸ್ವಪ್ನ ನಿಜವಾಯಿತು !

ಮತ್ತೆ ಕೆಲವು ದಿನಗಳ ಮೇಲೆ ಸುಬ್ಬಯ್ಯನಿಗೆ ಸ್ವಪ್ನದಲ್ಲಿ, "ಸಾವಿರ ರೂಪಾಯಿ ದಾನ ಮಾಡು. ಹತ್ತು ಸಾವಿರ ಲಭಿಸುತ್ತದೆ !" ಎಂದು ಶಬ್ದವಾಯಿತು. ಮರುದಿನ ಸುಬ್ಬಯ್ಯ ಸಾವಿರ ರೂಪಾಯಿ ಖರ್ಚುಮಾಡಿ ದೊಡ್ಡ ರೀತಿಯಲ್ಲಿ ದಾನ ಧರ್ಮಮಾಡಿದನು.

ಆ ದಿನವೇ ಅವನ ಸಮೀಪದ ಬಂಧು ಒಬ್ಬನು ಸತ್ತನು. ಅವನ ಹತ್ತು ಸಾವಿರ ರೂಪಾಯಿಯ ಆಸ್ತಿ ಸುಬ್ಬಯ್ಯನಿಗೇ ಸಂಕ್ರಮಿಸಿತು.

ಮತ್ತೆ ಕೆಲವು ದಿನಗಳ ಮೇಲೆ ಸುಬ್ಬಯ್ಯನ ಹೆಂಡತಿಯ ಕನಸಿನಲ್ಲಿ, "ಹತ್ತು ಸಾವಿರ ರೂಪಾಯಿ ದಾನ ಮಾಡು, ಲಕ್ಷ ರೂಪಾಯಿ ದೊರಕುತ್ತದೆ !" ಎಂಬ ಮಾತು ಕೇಳಿಸಿತು.

ಅವಳು ಸುಬ್ಬಯ್ಯನೊಂದಿಗೆ ಈ ಮಾತು ಹೇಳಿದಳು. ಸ್ವಪ್ನದಲ್ಲಿ ಗಟ್ಟಿ ನಂಬುಗೆಯಿಂದಿದ್ದ ಸುಬ್ಬಯ್ಯ ಹತ್ತು ಸಾವಿರ ಖರ್ಚು ಮಾಡಿ ಊರಿಗೆಲ್ಲ ಔತಣ ಮಾಡಿಸಿದ.

ಮರುದಿನವೇ ಸುಬ್ಬಯ್ಯನು ಹೃದಯಾಘಾತದಿಂದ ಸತ್ತನು. ಅವನ ಲಕ್ಷ ರೂಪಾಯಿ ಆಸ್ತಿ ಹೆಂಡತಿಯ ವಶಕ್ಕೆ ಬಂತು. ಈಸಲೂ ಸ್ವಪ್ನ ನಿಜವೇ ಆಯಿತು !





# ಗುಂಡಪ್ಪನ ಗರ್ವಭಂಗ

ಅನೇಕ ವರ್ಷಗಳ ಹಿಂದೆ ಒಬ್ಬ ತುಂಡರಸನ ಸಂಸ್ಥಾನದಲ್ಲಿ ಒಬ್ಬ ವಸ್ತಾದಿ ಬಹಳ ಹೆಸರು ವಾಸಿಯಾಗಿದ್ದ. ಗುಂಡಪ್ಪ ಜಟ್ಟಿಯೆಂದರೆ ಎಂತೆಂತಹ ವೀರರಿಗೂ ಎದೆ ಗುಂಡಿಗೆ ನಡುಗುತಿತ್ತು. ಅವನ ಆಹಾರಕ್ಕೆ ಐದಾರುಮಂದಿಯ ತಿಂಡಿ ಬೇಕು. ಹಾಗೆ ತಿನಿತಿಂದು ಕಂಡತಿರುಗಿದ ಉದ್ಧಂಡನಾಗಿ ನೋಡುವವರಿಗೆ ಭಯ ಹುಟ್ಟಿಸುವವನಾಗಿದ್ದನು. ಅವನೊಂದಿಗೆ ಮಲ್ಲಯುದ್ಧ ಮಾಡಿ ಗೆದ್ದವರೇ ಇಲ್ಲ. ಸಾಹಸದಿಂದ ಯುದ್ಧ ಕಟ್ಟಿ ಸೋತವರು ಒಂದು ತಿಂಗಳು ಹಾಸಿಗೆ ಹಿಡಿಯುತ್ತಿದ್ದರು. ಆದುದರಿಂದ ಯಾವಾಗೆಂದರಾವಾಗ ಅವನೊಂದಿಗೆ ಸವಾಲಿಗೆ ಬರುವವರಿರಲಿಲ್ಲ.

ಹೀಗಾಗಿ ಗುಂಡಪ್ಪನು ಬಲಿತು ಸೊಕ್ಕಿದ ಹಾಗೆ ಅವನ ಗರ್ವವೂ ಚೆನ್ನಾಗಿ ಬಲಿತಿತ್ತು. ಅವನಿಗೆ ಒಬ್ಬರ ಭಯವೋ ಭಕ್ತಿಯೋ ಅಪ್ಪಣೆಯೋ ಇಲ್ಲದೆ ಹೋಯಿತು. ಅಂಗಡಿಗೆ ಹೋದರೆ ತನಗೆ ಬೇಕಾದುದನ್ನು ಸ್ವೇಚ್ಛೆಯಿಂದ ಕೈಹಾಕಿ ತೆಗೆದುಕೊಳ್ಳುತ್ತಿದ್ದನು. ಅಭ್ಯಂತರ ಹೇಳಿದವರನ್ನು ಚೆನ್ನಾಗಿ ಹೊಡೆದು ಬಿಡುತ್ತಿದ್ದನು. ಆದುದರಿಂದ ಅವನು ಏನು ಮಾಡಿದರೂ ಯಾರೂ ಬಾಯಿಯೆತ್ತುತಿದ್ದಿಲ್ಲ.

ಒಂದು ದಿನ ಒಬ್ಬಳು ಮುದುಕಿ ಮುಸುಂಬಿ ಹಣ್ಣುಗಳನ್ನು ಬುಟ್ಟಿಯಲ್ಲಿಟ್ಟುಕೊಂಡು ಮಾರಾಟ ಮಾಡಲು ಬೀದಿಯ ಬದಿಯಲ್ಲಿ ಕುಳಿತಿದ್ದಳು. ಗುಂಡಪ್ಪನು ಅವಳ ಬುಟ್ಟಿಯೊಳಗೆ ಕೈ ಹಾಕಿ ತನಗೆ ಬೇಕಾದಷ್ಟು ಹಣ್ಣುಗಳನ್ನು ತೆಗೆದುಕೊಂಡನು. ಮುದುಕಿ ಅವುಗಳ ಬೆಲೆ ಹೇಳಿ ಕೊಡುವಂತೆ ಕೈ ನೀಡಿದಳು. ಕೂಡಲೇ ಗುಂಡಪ್ಪನು ಅವಳ ಬುಟ್ಟಿ ಬೀದಿಯಲ್ಲಿ ಹೊರಳಾಡುವಂತೆ ಒದ್ದು ಜಾಡಿಸಿದನು. ಹಣ್ಣುಗಳು ಬೀದಿಯಲ್ಲಿ ಹೊರಳಾಡಿದುವು.

"ಏನೋ ಇದೂ ಭೂತ ಬಡಿದವನೇ! ನಿನ್ನ ಪ್ರತಾಪ ಈ ಮುದುಕೀ ಮೇಲೆ ತೋರಿಸುವಿಯಾ? ಕೈಲಾದರೆ ನಮ್ಮೂರ ಬಂಡಪ್ಪನ ಮೇಲೆ ತೋರಿಸೋ!" ಎಂದಳು ಮುದುಕಿ ಹಣ್ಣುಗಳನ್ನು ಹೆಕ್ಕಿಕೊಳ್ಳುತ್ತಾ.

"ಯಾವ ಊರು ನಿನ್ನದು?" ಎಂದು ಗುಂಡಪ್ಪನು ಕೋಪದಿಂದ ಕೇಳಿದನು.

"ಬಾಳೇ ತೋಟ, ಹೋಗು ಗೊತ್ತಾಗುತ್ತೆ" ಎಂದಳು ಮುದುಕಿ. "ಹೋಗದೆ ಬಿಡುತೇನೆಂದು ಕೊಂಡೆಯಾ? ನನ್ನ ಪ್ರತಾಪ ನೋಡವಿಯಂತೆ

ಎ. ಬಾಪೂಜಿ



ಹೊರಟು ಹೋಗಿಬಿಟ್ಟರು. ತರುವಾಯ ಕೋಲೂರಿ ಕೊಂಡು ಒಬ್ಬ ಮುದುಕನು ಎಲ್ಲಿಗೋ ಹೋಗುವು ದನ್ನು ನೋಡಿ ನಿಲ್ಲಿಸಿ, "ಏಯ್ ಮುದುಕಾ! ಈ ಊರಿನಲ್ಲಿ ಬಂಡಪ್ಪ ಎಂಬೊಬ್ಬ ಇದ್ದಾನಂತಲ್ಲಾ? ಅವನು ಎಲ್ಲಿದ್ದಾನೆ ನಿನಗೆ ಗೊತ್ತಾ?" ಎಂದು ಕೇಳಿದನು.

"ಗೊತ್ತಿಲ್ಲದೇನಪ್ಪಾ! ಊರಾಚೆಗಿರುವ, ಅಕೋ ಆ ಹುಣಿಸೇ ತೋಪಿನಲ್ಲಿ ಕುರಿಗಳನ್ನು ಮೇಯಿಸುತ್ತಾ ಇರುತ್ತಾನೆ" ಎಂದ ಮುದುಕ.

"ಸರಿ. ನಾನು ಯಾರೆಂದು ನಿನಗೆ ಗೊತ್ತೇನು?" ಎಂದು ಗುಂಡಪ್ಪನು ಗರ್ವದಿಂದ ಕೇಳಿದ.

"ನೀನು ಯಾರಾದರೆ ನನಗೇನಪ್ಪಾ? ನೀನೂ ನನ್ನ ಹಾಗೇ ಒಬ್ಬ ಮನುಷ್ಯ. ವಯಸ್ಸಿನಲ್ಲಿ ಚಿಕ್ಕವ. ಗಟ್ಟಿ ಮುಟ್ಟಾಗಿದ್ದೀ. ನಾನು ವಯಸ್ಸಾದ ಹಳಬ. ಸೊರಗಿ ಹೋಗಿ ನಡುಗುತ್ತೇನೆ. ಅಷ್ಟೇ" ಎಂದು ಮುದುಕನು ಕೋಲೂರಿಕೊಂಡು ಹೊರಟು ಹೋದನು.

ಗುಂಡಪ್ಪನು ಊರಾಚೆಗಿನ ಹುಣಿಸೇ ತೋಪಿನ ಕಡೆಗೆ ಹೋದನು. ಅವನು ಅಲ್ಲಿಗೆ ಹೋಗಿ ಮುಟ್ಟಿ ದಾಗ, ಒಬ್ಬ ಮನುಷ್ಯನು ದೋಟಿಯಿಂದ ಹುಣಿಸೇ ಎಗ್ಗೆಗಳನ್ನು ಕೊಯಿದು ಕುರಿಗಳನ್ನು ಮೇಯಿಸಿ ಕೊಂಡಿದ್ದನು.

ಗುಂಡಪ್ಪನು ಅವನನ್ನು ಮೇಲಿಂದ ಕೆಳಗಿನವರೆಗೆ ನೋಡುತ್ತ, "ನೀನೇನಾ ಬಂಡಪ್ಪನೆಂದರೆ?" ಎಂದು ಜೋರಿನಿಂದ ಕೇಳಿದನು.

ತಾನು ಈ ಮೊದಲು ಕೇಳಿದ ಸಮಾಚಾರದಂತೆ, ತುಂಡರಸರ ಆಸ್ಥಾನದ ಗುಂಡಪ್ಪ ಜಟ್ಟಿ ಇವನೇ ಆಗಿರಬೇಕೆಂದು ಬಂಡಪ್ಪನು ಊಹಿಸಿ, ಕೂಡಲೇ ತನ್ನ ಗುರುತನ್ನು ಅವನಿಗೆ ಹೇಳಲು ಇಷ್ಟವಿಲ್ಲದೆ, "ಅಲ್ಲ, ನಾನು ಅವನ ತಮ್ಮ, ನೀವು ಅರಸರ ಆಸ್ಥಾನದ ಮಾಮಲ್ಲರಲ್ಲವೇ? ನನ್ನ ಅಣ್ಣನೊಂದಿಗೆ ಏನು ಕೆಲಸವೋ?" ಎಂದನು.

ಮುದಿಕತ್ತೇ! ನಾಳೆ ಇಷ್ಟು ಹೊತ್ತಿಗೆ ಆ ಬಂಡಪ್ಪನ ಶವವನ್ನು ತಂದು ಈ ಬೀದಿಯಲ್ಲೇ ನಿನ್ನ ಮುಂದೆ ಹಾಕುತ್ತೇನೆ, ನೋಡು!" ಎಂದು ಗುಂಡಪ್ಪನು ಹಣ್ಣುಗಳನ್ನು ಅವಳ ಮುಖಕ್ಕೆ ಬಿಸುಟು ಹೊರಟು ಹೋದನು.

ಆದರೆ ಆ ಬಂಡಪ್ಪನ ಉರಿ ತಣಿಯುವಂತೆ ಕಾಣ ಲಿಲ್ಲ. ಕೂಡಲೇ ಒಂದು ಕುದುರೇ ಗಾಡಿಯನ್ನು ಹಿಡಿದು ಬಾಳೇ ತೋಟ ಗ್ರಾಮಕ್ಕೆ ಪ್ರಯಾಣ ಮಾಡಿದನು. ಗಾಡಿ ಬಾಳೇ ತೋಟ ಸೇರುವಾಗ ಸಾಯಂಕಾಲವಾಯಿತು. ಗುಂಡಪ್ಪನು ಗಾಡಿಯಿಂದ ಇಳಿದ ಕೂಡಲೇ ಗ್ರಾಮಸ್ಥರು ಅವನನ್ನು ನೋಡಿ ದೆವ್ವವನ್ನು ನೋಡಿದಂತೆ ಹೆದರಿ ದೂರ ತಪ್ಪಿಸಿ ಕೊಂಡು ಹೋದರು. ಅದನ್ನು ನೋಡಿ ಗುಂಡಪ್ಪನು ಹೆಮ್ಮೆಪಡುತ್ತ ಮೀಸೆ ತಿರುವಿಕೊಂಡನು.

ತನ್ನನ್ನು ನೋಡಿ ದೂರ ಹೋಗುವವರನ್ನು ಗುಂಡಪ್ಪನು ಕರೆದರೆ ಅವರು ಮತ್ತಿಷ್ಟು ವೇಗವಾಗಿ

"ಅವನಿಗೆ ತುಂಬಾ ಗರ್ವ ತಲೆಗೇರಿದೆಯಂತಲ್ಲಾ? ಎಷ್ಟರ ಮಟ್ಟಿಗೆ ಇದ್ದಾನೋ ನೋಡುವಾ ಅಂತ ಬಂದೆ" ಎಂದು ಗುಂಡಪ್ಪನು ಬಂಡಪ್ಪನ ದೋಟಿ ಹಿಡಿದು ಹುಣಿಸೇ ಕೊಂಬೆಯನ್ನು ಎಳೆದನು. ಅದು ನಿಟಿನಿಟಿಲೆಂದು ದೊಡ್ಡ ಶಬ್ದದಿಂದ ಮುರಿದುಬಿತ್ತು.

ಗುಂಡಪ್ಪನು ಆಶ್ಚರ್ಯದಿಂದ ನೋಡುತ್ತ, "ಇವನೊಬ್ಬ ನನ್ನ ಅಣ್ಣ! ನಿಮ್ಮ ಕಾಲಿನ ಉಗುರಿಗೂ ಸಾಟಿಬಾರ! ಅವನೆಲ್ಲಿ, ನೀವೆಲ್ಲಿ? ಬಲವೆಂದರೆ ನಿಮ್ಮದೇ." ಎಂದನು.

"ಮೊದಲು ಅವನು ಎಲ್ಲಿದ್ದಾನೆಂದು ಹೇಳು" ಎಂದು ಗುಂಡಪ್ಪನು ಹುಂಕರಿಸಿದನು.

"ಪಕ್ಕದ ಊರಿಗೆ ಹೋಗಿದ್ದಾನೆ. ರಾತ್ರಿಯಲ್ಲಿ ಬಂದಾನು. ಹಾಗೂ ನಿಮಗೆ ನೋಡಬೇಕೆಂದಿದ್ದರೆ ನೋಡಬಹುದು. ಅಷ್ಟರವರೆಗೆ ನೀವು ನನ್ನೊಂದಿಗೆ ಇರಬಹುದಲ್ಲ? ಈ ಕುರಿಗಳನ್ನು ಹಟ್ಟಿಗೆ ಸಾಗಿಸುತ್ತೇನೆ, ಬನ್ನಿ" ಎಂದನು ಬಂಡಪ್ಪ. ಹಾಗೆಯೇ ಬಂಡಪ್ಪನು ಗುಂಡಪ್ಪನನ್ನು ಮನೆಗೆ ಕರೆದುಕೊಂಡು ಹೋಗಿ, "ಅಮ್ಮಾ, ರಾತ್ರಿ ಊಟಕ್ಕೆ ಇನ್ನೊಬ್ಬರು ಅತಿಥಿಗೆ ಕೂಡಾ ಅಡಿಗೆ ಮಾಡಿಬಿಡು" ಎಂದು ಕೂಗಿ ಹೇಳಿದನು.

"ಹುಂ! ನಿನ್ನ ಮುಷ್ಟಿ ಮುದ್ದೆ ನನಗೆ ಯಾವ ಮೂಲೆಗೆ!" ಎಂದು ಗುರುಗುಟ್ಟಿದ ಗುಂಡಪ್ಪ.

"ಏನು ಮಾಡೋದು ಆಯ್ಯಾ. ಕುರಿಗಳನ್ನು ಕೊಯ್ಯೋಣವೆಂದರೆ ಅವು ನಮ್ಮದಲ್ಲ, ಊರವರದು, ಹೇಗೋ ಈ ಒಂದು ಹೊತ್ತು ಈ ಬಡವನ ಆತಿಥ್ಯ ಸ್ವೀಕರಿಸಿಬಿಡಿ" ಎಂದನು ಬಂಡಪ್ಪ.

ಮತ್ತೊಂದು ಗಂಟೆಯ ಮೇಲೆ ಇಬ್ಬರೂ ಊಟಕ್ಕೆ ಕುಳಿತರು. ಬಂಡಪ್ಪನ ತಾಯಿ ಎರಡು ದೊಡ್ಡ ಎಲೆಗಳಲ್ಲಿ ಉದುರನ್ನ ಬಡಿಸಿದಳು. ಮೇಲೆ ಯಾವುದೋ ಚಟ್ನಿಯನ್ನು ಹಾಕಿ, ಹುಳಿಯನ್ನೂ ಸುರಿದಳು.

"ಗುಂಡಪ್ಪನು ಕಲಿಸಿ ಒಂದು ಹಿಡಿಕೆ ಬಾಯಿಗೆ ಹಾಕಿ "ಛೀಛೀ! ಇದೇನು ಅನ್ನವೋ ಕಲ್ಲುಗಳ ರಾಶಿಯೋ?" ಎಂದನು.



"ಹಳ್ಳಿಗಾಡಿನ ಮುದುಕರಿಗಾದರೆ ಅನ್ನ ಮೆತ್ತಗಿರಬೇಕು. ಕಲ್ಲು ತಿಂದು ಕರಗಿಸಿಕೊಳ್ಳುವಂಥ ನಮ್ಮಂಥವರಿಗೇಕೆ ಹೇಳಿ?" ಎಂದು ಬಂಡಪ್ಪನು ಹುಸುರಾಗಿ ಹೇಳಿದುದು ಕೇಳಿ, ಗುಂಡಪ್ಪನಿಗೆ ತುಸು ನಾಚಿಕೆಯಾಯಿತು. ಆದರೆ ಮೆತ್ತಗಿನ ಮಾಂಸವನ್ನೇ ತಿಂದು ಅಭ್ಯಾಸವಾದವನಿಗೆ ಈ ಬೆಂದೂ ಬೇಯದ ಉದುರನ್ನ ಗಂಟಲಿಗಿಳಿಯದೆ ಸಿಕ್ಕಿಕೊಳ್ಳುತ್ತಿತ್ತು. ಪ್ರತಿ ತುತ್ತಿಗೂ ನೀರು ಗುಟಕರಿಸುತ್ತಿದ್ದನು. ತುತ್ತಿನ ಮೇಲೆ ತುತ್ತಾಗಿ ಅಗಿದು ನುಂಗುವ ಬಂಡಪ್ಪನ ಮುಂದೆ ಬಾಯಿಯೆತ್ತಿದರೆ ನಾಚಿಗೇಡು!

ಗುಂಡಪ್ಪನ ಅವಸ್ಥೆಯನ್ನು ಗಮನಿಸುತ್ತಿದ್ದ ಬಂಡಪ್ಪನು ತನ್ನೊಳಗೆ ತಾನು ನಗುತ್ತ, "ಅಮ್ಮಾ, ಈ ಚಟ್ನೀ ಮೇಲೆ ಸ್ವಲ್ಪ ಹೊಸ ಎಳ್ಳೆಣ್ಣೆ ಬೇಕು, ತಾ, ತಾಮ್ಮಾ" ಎಂದನು.

"ಬದುಕಿದೆನಬ್ಬ!" ಎಂದು ತೋರಿತು ಗುಂಡಪ್ಪನಿಗೆ. ಎಣ್ಣೆ ಬಿದ್ದರೆ ಅನ್ನ ಕಲಸಿ ಹೇಗೋ ನುಂಗಿಕೊಳ್ಳಬಹುದೆನಿಸಿತು.

ಆದರೆ ಬಂಡಪ್ಪನ ತಾಯಿ ಎಣ್ಣೆ ತರಲಿಲ್ಲ, ಎಳ್ಳನ್ನು ತಂದಿದ್ದಳು.

"ನೋಡುವಿರೇನ್ರೀ ಅಯ್ಯಾ, ಎಣ್ಣೇ ಹಾಕ್ಕೊಳ್ರೀ. ಗಮಗಮಾಂತ ಇರುತ್ತೆ" ಎಂದು ಬಂಡಪ್ಪನು ತನ್ನ ಎಡಗೈಯಲ್ಲಿ ಒಂದು ಮುಷ್ಟಿ ಎಳ್ಳು ತೆಗೆದುಕೊಂಡು, ಹಿಂಡಿ ತನ್ನ ಅನ್ನದ ಮೇಲೆ ಸುರಿದುಕೊಂಡನು. ಇಂತಹ ಕೆಲಸ ಸಾಧ್ಯವೆಂದು ಗುಂಡಪ್ಪನು ಅಂದುಕೊಂಡಿಲ್ಲ. ಆದರೆ ಅವನು ಮಾಡಿದ ಕೆಲಸ ತಾನೂ ಮಾಡುವೆನೆಂದುಕೊಂಡು ಇಷ್ಟು ಎಳ್ಳನ್ನು ಕೈಗೆ ಹಾಕಿಸಿ ಹಿಂಡ ತೊಡಗಿದನು. ನೋವಾಯಿತೇ ಹೊರತು ಒಂದು ಬೊಟ್ಟು ಎಣ್ಣೆಯೂ ಬೀಳಲಿಲ್ಲ.

"ಏನು ಎಣ್ಣೆ ಬರಲಿಲ್ಲವೇ?" ಎನ್ನುತ್ತಾ ಬಂಡಪ್ಪನು ತನ್ನ ಎಡಗೈಯಿಂದ ಗುಂಡಪ್ಪನ ಎಳ್ಳಿನ ಕೈಯನ್ನು ಹಿಡಿದು ಗಟ್ಟಿಯಾಗಿ ಹಿಂಡಿದನು. ಗುಂಡಪ್ಪನ ಕೈಯಿಂದ ಎಣ್ಣೆಯೊಂದಿಗೆ ಬೆಚ್ಚಗೆ ರಕ್ತದ ಬೊಟ್ಟುಗಳೂ ಕಾರಿದುವು.

ಗುಂಡಪ್ಪನ ಪ್ರಾಣ ಹೋಗುವ ಹಾಗಾಯಿತು. ಭಾರೀ ನೋವು! ಉರಿ! ಹಾ ಎಂದು ಬಾಯಿ ಬಿಡಲು ಅಭಿಮಾನ! ಕಡೆಗೆ ಹೇಗೋ ಗಂಟಲು ತೆರೆದು "ಸಾಕಪ್ಪ!" ಎಂದನು ಗುಂಡಪ್ಪ.

ಬಂಡಪ್ಪನು ಗುಂಡಪ್ಪನ ಕೈಯನ್ನು ಬಿಟ್ಟು, ಊಟ ಮಾಡಲು ತೊಡಗಿದನು.

"ಈಗಲೇ ಬರುತ್ತೇನೆ" ಎಂದು ಹೇಳಿ ಗುಂಡಪ್ಪನು ಎದ್ದು, ಉರಿಯುತ್ತಿರುವ ಅಂಗೈಯನ್ನು ಊದಿಕೊಳ್ಳುತ್ತ ಹೊರ ಬಿದ್ದು, ಕತ್ತಲೆಯಲ್ಲಿಯೇ ತನ್ನ ಮನೆಗೆ ಹೊರಟು ಹೋದನು. ಮತ್ತೆ ಈ ದಿಕ್ಕಿಗೆ ತಿರುಗಿ ನೋಡಲಿಲ್ಲ. ಅವನ ಗರ್ವ ಅಡಗಿತ್ತು!






# ಉತ್ತಮನ ಕಥೆ

ಉತ್ತಾನಪಾದ ಮಹಾರಾಜನಿಗೆ ಸುರುಚಿ ಎಂಬ ಪತ್ನಿಯಲ್ಲಿ ಒಬ್ಬ ಮಗನು ಹುಟ್ಟಿದನು. ಅವನ ಹೆಸರು ಉತ್ತಮ. ಹಿರಿಯ ರಾಣಿ ಸುನೀತಿಯ ಮಗನಾದ ಧ್ರುವನಿಗೆ ಇವನು ತಮ್ಮನಾಗಬೇಕು. ಉತ್ತಾನಪಾದನ ರಾಜ್ಯವು ಅವನ ತರುವಾಯ ಉತ್ತಮನಿಗೂ ಸಿಕ್ಕಿ ಅವನೂ ರಾಜನಾದನು.

ಉತ್ತಮನು ಬಹುಳಾ ಎಂಬವಳನ್ನು ವಿವಾಹವಾದನು. ಆದರೆ ಅವಳಿಗೆ ಗಂಡನೆಂದರೆ ಸ್ವಲ್ಪವೂ ಲಕ್ಷ್ಯವಿಲ್ಲದೆ, ಮಾತುಮಾತಿಗೂ ಅವಮಾನ ಪಡಿಸುತ್ತಿದ್ದಳು. ಕಡೆಗೆ ಉತ್ತಮನು ಸಹಿಸಲಾರದವನಾಗಿ ಅವಳನ್ನು ಅರಣ್ಯದಲ್ಲಿ ಬಿಟ್ಟು ಬರುವಂತೆ ಭಟರಿಗೆ ಆಜ್ಞೆ ಮಾಡಿದನು.

ಬಹುಳಾ ಅರಣ್ಯದಲ್ಲಿ ದಿಕ್ಕಿಲ್ಲದೆ ತಿರುಗುವಾಗ ವಾಲಪೋತಕನೆಂಬ ನಾಗನು ಅವಳನ್ನು ತನ್ನ ಮನೆಗೆ ಕರೆದುಕೊಂಡು ಹೋದನು. ಆ ನಾಗನಿಗೆ ನಂದಾ ಎಂಬ ಮಗಳಿದ್ದಳು. ಅವಳು ಬಹುಳಾಳನ್ನು ನೋಡಿ, ತನ್ನ ತಾಯಿಗೆ ಇವಳು ಸವತಿಯಾಗುವಳೇನೋ ಎಂದು ಹೆದರಿ, ಅವಳನ್ನು ಒಂದು ರಹಸ್ಯ ಪ್ರದೇಶದಲ್ಲಿ ಅಡಗಿಸಿಟ್ಟು ಪೋಷಿಸುತ್ತಾ ಬಂದಳು.

ಅನಂತರ ಒಂದುದಿನ ಸುಶರ್ಮನೆಂಬ ಬ್ರಾಹ್ಮಣನು ಉತ್ತಮ ರಾಜನ ಬಳಿಗೆ ಬಂದು, "ನನ್ನ ಹೆಂಡತಿಯನ್ನು ಯಾರೋ ಎತ್ತಿಕೊಂಡು ಹೋದರು. ಅವಳನ್ನು ಹುಡುಕಿ ಕೊಡಬೇಕಾದವನು ರಾಜನಾದ ನೀನಲ್ಲದೆ ಬೇರೆ ಯಾರೂ ಇಲ್ಲ." ಎಂದನು.

"ಅವಳು ಹೇಗಿರುತ್ತಾಳೆ?" ಎಂದು ಉತ್ತಮನು ಕೇಳಿದನು. "ಕರ್ರಗೆ, ಗಿಡ್ಡಗೆ, ಕುರೂಪಿಯಾಗಿ, ಮುದುಕಿಯ ಹಾಗಿರುತ್ತಾಳೆ" ಎಂದ ಸುಶರ್ಮ.

"ಅಂಥವಳಿಗೋಸ್ಕರ ಚಿಂತಿಸುವುದೇಕೆ? ಇನ್ನೊಬ್ಬಳನ್ನು ಮದುವೆಯಾಗಬಾರದೆ?" ಎಂದು ಕೇಳಿದ ಉತ್ತಮ.

"ಹೆಂಡತಿ ಎಂಥವಳಾದರೂ ರಕ್ಷಿಸಬೇಕಾದುದು ಗಂಡನ ಧರ್ಮ" ಎಂದ ಸುಶರ್ಮ ಬ್ರಾಹ್ಮಣ.

ಸರಿಯೆಂದು ಉತ್ತಮನು ಸುಶರ್ಮನ ಹೆಂಡತಿಯನ್ನು ಹುಡುಕಲು ರಥವೇರಿ ಹೊರಟನು. ಹುಡುಕುತ್ತಾ ಅರಣ್ಯದಲ್ಲಿ ತ್ರಿಕಾಲಜ್ಞನೆಂಬ ಮುನಿಯ ಆಶ್ರಮಕ್ಕೆ ಹೋದನು. ರಾಜನನ್ನು ನೋಡಿ ತ್ರಿಕಾಲಜ್ಞನು ಬಂದ ಅತಿಥಿಗೆ ಅರ್ಘ್ಯ ತರುವಂತೆ ಶಿಷ್ಯನಿಗೆ ಹೇಳಿದನು.

ಆದರೆ ಶಿಷ್ಯನು ಕದಲದೆ, "ಇವನಿಗೆ ಅರ್ಘ್ಯ ತೆಗೆದುಕೊಂಡು ಬರಬೇಕೇ ಬೇಡವೇ ಸ್ವಲ್ಪ ಆಲೋಚನೆಮಾಡಿ ಗುರುವೇ" ಎಂದನು.

ಪತ್ನಿ ಇಲ್ಲದವನಿಗೆ ಅರ್ಘ್ಯ ಕೊಡಬಾರದೆಂದು ಗುರುವಿಗೆ ನೆನಪಾಗಿ, ಬಂದ ಕೆಲಸವೇನೆಂದು ರಾಜನನ್ನು ಕೇಳಿದನು.

ರಾಜನು ಸುಶರ್ಮನ ಹೆಂಡತಿಯ ವಿಷಯವನ್ನು ಹೇಳಿ, "ನನಗೇಕೆ ನೀವು ಅರ್ಘ್ಯ ಮುಂತಾದ್ದು ಕೊಡಲಿಲ್ಲ?" ಎಂದು ಕೇಳಿದನು.

"ಪತ್ನಿ ಇಲ್ಲದವರಿಗೆ ಅರ್ಘ್ಯ ಕೊಡಬಾರದೆಂದಿದೆ. ನೀನು ಹುಡುಕಿಕೊಂಡು ಬಂದ ಸುಶರ್ಮನ ಹೆಂಡತಿಯನ್ನು ಬಲಾಕನೆಂಬ ರಾಕ್ಷಸನು ಎತ್ತಿಕೊಂಡು ಹೋಗಿ ಬಂಧನದಲ್ಲಿಟ್ಟಿದ್ದಾನೆ" ಎಂದನು ತ್ರಿಕಾಲಜ್ಞ ಮುನಿ.

ಉತ್ತಮನು ಮುನಿಯ ಆಶ್ರಮವನ್ನು ಬಿಟ್ಟು ಬಲಾಕ ರಾಕ್ಷಸನಿರುವ ಸ್ಥಳವನ್ನು ಹುಡುಕುತ್ತಾ ಹೋಗಿ, ನಿರ್ಬಂಧದಲ್ಲಿರುವ ಸುಶರ್ಮನ ಹೆಂಡತಿಯನ್ನು ನೋಡಿದನು.

ಅವಳನ್ನು ಮಾತಾಡಿಸಲು, "ರಾಕ್ಷಸನು ನನ್ನನ್ನು ಇಲ್ಲಿ ಬಂಧಿಸಿ ಇಟ್ಟಿದ್ದಾನೆಯೇ ಹೊರತು, ತಿನ್ನಲೂ ಇಲ್ಲ, ಹಿಂಸಿಸಲೂ ಇಲ್ಲ. ಏಕೆ ತಂದನೋ ನಾನರಿಯೆ" ಎಂದಳು ಅವಳು.

"ನೀನು ಈ ಹೆಂಗುಸನ್ನು ಏಕೆ ತಂದೆ?" ಎಂದು ಉತ್ತಮನು ರಾಕ್ಷಸನನ್ನೇ ಕೇಳಿದನು. ರಾಕ್ಷಸನು ರಾಜನಿಗೆ ಆತಿಥ್ಯವಿತ್ತು, "ಇವಳ ಗಂಡ ಸುಶರ್ಮನು ರಾಕ್ಷಸರನ್ನು ನಾಶಮಾಡಲು ಯಜ್ಞಮಾಡುತ್ತಾನೆ. ಹೆಂಡತಿ ಇಲ್ಲದಿದ್ದರೆ ಯಜ್ಞಮಾಡಲು ಸಾಧ್ಯವಿಲ್ಲವಷ್ಟೇ? ಅದಕ್ಕೇ" ಎಂದನು.

ಆದರೂ ಈಗ ಯಜ್ಞಕಾಲವು ಮೀರಿಹೋದುದರಿಂದ, ಸುಶರ್ಮನ ಹೆಂಡತಿಯನ್ನು ರಾಜನೊಂದಿಗೆ ಕಳುಹಿಸಲು ರಾಕ್ಷಸನು ಒಪ್ಪಿದನು.

ಉತ್ತಮನು ಸುಶರ್ಮನ ಹೆಂಡತಿಯೊಂದಿಗೆ ತ್ರಿಕಾಲಜ್ಞನ ಆಶ್ರಮಕ್ಕೆ ಬಂದು, ತನ್ನ ಹೆಂಡತಿ ಎಲ್ಲಿರುವಳೆಂದು ಹೇಳುವಂತೆ ಕೇಳಿಕೊಂಡನು.

"ನಿನ್ನ ಹೆಂಡತಿಯನ್ನು ಪಾಲಪೋತಕನೆಂಬ ನಾಗನು ಎತ್ತಿಕೊಂಡು ಹೋಗಿದ್ದಾನೆ. ನಾಗನ ಮಗಳು ಅವಳನ್ನು ರಕ್ಷಿಸುತ್ತಿದ್ದಾಳೆ" ಎಂದು ಮುನಿ ಉತ್ತಮನೊಂದಿಗೆ ಹೇಳಿದನು.

ಬಳಿಕ ಉತ್ತಮನು ಬಲಾಕರಾಕ್ಷಸನನ್ನು ಕಳುಹಿಸಿ, ತನ್ನ ಹೆಂಡತಿಯನ್ನು ಕರೆಯಿಸಿಕೊಂಡನು.

ಆ ಮೇಲೆ ಬಹುಳಾ ತನ್ನ ಗಂಡನಿಗೆ ಅನುಕೂಲಳಾಗಿರುತ್ತ, ಒಬ್ಬ ಮಗನಿಗೆ ತಾಯಿಯಾದಳು. ಅವಳ ಮಗನು ದೊಡ್ಡವನಾಗಿ "ಉತ್ತಮ ಮನು" ಎಂದು ಪ್ರಸಿದ್ಧನಾದನು.





# ಪ್ರಾರ್ಥನೆಯ ಮಹಿಮೆ

ಕೋಸಲ ದೇಶವನ್ನು ಅಂಬರೀಷನೆಂಬ ರಾಜನು ಪಾಲಿಸಿಕೊಂಡಿದ್ದಾಗ ಒಮ್ಮೆ ಅತಿ ದೀರ್ಘ ಕಾಲದ ಕ್ಷಾಮ ಸಂಭವಿಸಿತು. ನದಿ ಬಾವಿ ಕೆರೆಗಳೆಲ್ಲಾ ಒಣಗಿದುವು. ಪೈರು ಪಚ್ಚೆಗಳು ಬೆಳೆಯದೆ ಭೂಮಿ ಬರಡಾಯಿತು.



ಚಿಂತೆಗೆ ಬಿದ್ದ ರಾಜನೊಂದಿಗೆ ಮಂತ್ರಿ ಪುರೋಹಿತಾದಿಗಳು, ಅಶ್ವಮೇಧ ಯಾಗ ಮಾಡಿದರೆ ಮಳೆ ಸುರಿಯುತ್ತದೆಂದೂ, ಕ್ಷಾಮ ನಿವಾರಣೆಯಾಗುತ್ತದೆಂದೂ ಹೇಳಿದರು. ಬಹಳ ಜಾಗರೂಕತೆಯಿಂದ ಮಾಡಬೇಕಾದ ಯಜ್ಞವದು.



ಈ ಯಜ್ಞಕ್ಕೆ ತಕ್ಕುದಾದ ಸರ್ವ ಲಕ್ಷಣಗಳಿರುವ ಕುದುರೆಯನ್ನು ತಂದು, ಮಿಾಯಿಸಿ ಅಲಂಕಾರ ಮಾಡಿ ಬಲಿ ಕೊಡಲು ಸಿದ್ಧ ಮಾಡಿದರು.




ಅಂಬರೀಷನು ಇಂದ್ರ ಪದವಿಗಾಗಿಯೇ ಯಜ್ಞ ಮಾಡುವನೆಂದು ದೇವತೆಗಳು ಭಾವಿಸಿದರು. ಅಂತೆಯೇ ಯಜ್ಞಕ್ಕೆ ವಿಘ್ನವನ್ನುಂಟುಮಾಡಲು ಯಾಗಾಶ್ವವನ್ನು ದೇವತೆಗಳು ಕದ್ದೊಯ್ದರು.




ಯಾಗಾಶ್ವವು ಕಾಣದೆ ಹೋಗಲು, ರಾಜನೂ, ಪುರೋಹಿತರೂ ಬಹಳ ಕಳವಳಗೊಂಡು ಅದನ್ನು ಹುಡುಕಿಸಲು ತೊಡಗಿದರು. ರಾಜ ಭಟರು ಕಾಡುಮೇಡು, ಹಳ್ಳಕೊಳ್ಳಗಳನ್ನೆಲ್ಲಾ ಹುಡುಕಿದರೂ ಯಾಗಾಶ್ವವು ಸಿಕ್ಕಲಿಲ್ಲ.




ಅಶ್ವವನ್ನು ಕಳೆದುಕೊಂಡು ಚಿಂತೆಯಲ್ಲಿರುವ ರಾಜನೊಂದಿಗೆ ಪುರೋಹಿತರು, "ಈ ಪರಿಸ್ಥಿತಿಯಲ್ಲಿ ಅಶ್ವಕ್ಕೆ ಬದಲಾಗಿ ಯಾವನಾದರೂ ಬ್ರಾಹ್ಮಣ ಬಾಲನನ್ನು ಬಲಿ ಕೊಡುವುದರ ಹೊರತು ಬೇರೆ ಮಾರ್ಗವಿಲ್ಲ" ಎಂದರು.

ಬಲಿ ಕೊಡಲು ಯೋಗ್ಯವಾದ ಲಕ್ಷಣಗಳಿರುವ ಬ್ರಾಹ್ಮಣ ಕುಮಾರನನ್ನು ಸಂಪಾದಿಸುವುದು ಸುಲಭವೇನಲ್ಲ. ಎಲ್ಲೆಲ್ಲೋ ಹುಡುಕಿದ ಮೇಲೆ ರುಚಿಕನೆಂಬ ಬ್ರಾಹ್ಮಣ ಮುನಿಗೆ ಮೂವರು ಕುಮಾರರಿರುವ ಸಂಗತಿ ತಿಳಿದು, ಸ್ವತಃ ರಾಜನೇ ಆ ಮುನಿಯ ಬಳಿಗೆ ಹೋದನು.





ರುಚಿಕನು ತನ್ನ ಹಿರಿಯ ಮಗನನ್ನು ಕೊಡಲು ಎಷ್ಟು ಮಾತ್ರಕ್ಕೂ ಸಾಧ್ಯವಿಲ್ಲವೆಂದನು. ರುಚಿಕನ ಹೆಂಡತಿ ತನ್ನ ಚಿಕ್ಕ ಮಗನನ್ನು ಕೊಡಲಾರೆನೆಂದಳು. ಮಧ್ಯಮ ಕುಮಾರನಾದ ಶುನಶ್ಶೇಪನು ಬಲಿಪಶುವಾಗುವೆನೆಂದು ಮುಂದೆ ಬಂದನು.

ರಾಜನು ತೃಪ್ತನಾಗಿ ಶುನಶ್ಶೇಪನನ್ನು ಕರೆದು ಕೊಂಡು ಮನೆಗೆ ಹೊರಟನು. ಮಧ್ಯ ದಾರಿ ಯಲ್ಲಿ ಅವರಿಗೆ ವಿಶ್ವಾಮಿತ್ರನ ಆಶ್ರಮವು ಸಿಕ್ಕಿತು. ಶುನಶ್ಶೇಪನು ಬಲಿಪಶುವಾಗಿ ಹೋಗುವವನೆಂದು ಅವರನ್ನು ವಿಚಾರಿಸಿ ತಿಳಿದು ಕೊಂಡನು. ಬಹಳ ಕನಿಕರವೆನಿಸಿತು ವಿಶ್ವಾ ಮಿತ್ರನಿಗೆ !





ವಿಶ್ವಾಮಿತ್ರನು ಶುನಶ್ಯೇಪನಿಗೆ ಒಂದು ಮಂತ್ರವನ್ನು ಉಪದೇಶಿಸಿ, ಅದನ್ನು ಪಠಿಸಿ ಪ್ರಾರ್ಥಿಸಿದರೆ ಆಪತ್ತು ನಿವಾರಣೆಯಾಗುವುದೆಂದು ಹೇಳಿದನು. ರಾಜನು ಶುನಶ್ಯೇಪನನ್ನು ಕರೆದೊಯ್ದು ಬಲಿಗೆ ತಯಾರುಗೊಳಿಸಿದನು.



ಶುನಶ್ಯೇಪನು ಬಲಿಗೆ ಕರೆದೊಯ್ಯಲ್ಪಡುತ್ತಿರುವಾಗ ವಿಶ್ವಾಮಿತ್ರನು ಉಪದೇಶಿಸಿದ ಮಂತ್ರವನ್ನು ಪಠಿಸಿ, ಪ್ರಾರ್ಥಿಸಿದನು. ಅದರ ಶಕ್ತಿಯಿಂದ ಅಲ್ಲಿದ್ದವರೆಲ್ಲಾ ಮರದ ಬೊಂಬೆಗಳಂತೆ ನಿಂತು ಬಿಟ್ಟರು.



ಅಕಸ್ಮಾತ್ತಾಗಿ ಅಗ್ನಿಕುಂಡದಿಂದ ಇಂದ್ರನು ಪ್ರತ್ಯಕ್ಷನಾಗಿ, ಅಂಬರೀಷನಿಗೆ ಯಜ್ಞಫಲವನ್ನು ಕೊಡಿಸಿ, ಶುನಶ್ಯೇಪನನ್ನು ಬಿಡಿಸಿದನು. ದೇವತೆಗಳ ರಾಜನಿಂದ ಕಾಪಾಡಲ್ಪಟ್ಟವನಾದುದರಿಂದ ಶುನಶ್ಯೇಪನಿಗೆ ದೇವರಾತನೆಂಬ ಹೆಸರು ಬಂತು.



# ದೇವಯಾನಿ

ಇತರರ ತಪಸ್ಸನ್ನು ಹಾಳು ಮಾಡಲು ಇಂದ್ರನು ಮಾಡಿದ ಪ್ರಯತ್ನಗಳು ಕೆಲವು ಫಲಿಸಿವೆ, ಕೆಲವು ವ್ಯರ್ಥವಾಗಿವೆ. ಇಂದ್ರನಿಂದ ಕೆಡಿಸಲಾಗದ ಪ್ರಯತ್ನದಲ್ಲಿ ಶುಕ್ರನ ತಪಸ್ಸೂ ಒಂದು.

ಶುಕ್ರನು ತೀವ್ರವಾದ ತಪಸ್ಸಿನಲ್ಲಿದ್ದಾಗ, ಅದನ್ನು ಕೆಡಿಸುವಂತೆ ಇಂದ್ರನು ತನ್ನ ಮಗಳಾದ ಜಯಂತಿಯನ್ನೇ ಕಳುಹಿಸಿದನು. ಆದರೆ ನಡೆದುದೇ ಬೇರೆ! ಅವಳಿಂದ ಶುಕ್ರನ ತಪಸ್ಸಿಗೆ ವಿಘ್ನ ಬರುವುದಕ್ಕೆ ಬದಲಾಗಿ ಅವಳು ಶುಕ್ರನ ತಪಸ್ಸಿಗೆ ಸಾಧಕಳೇ ಆಗಿ, ಬ್ರಹ್ಮನಿಂದ ಶುಕ್ರನು ವರಗಳನ್ನೂ ಪಡೆದನು. ಜಯಂತಿ ಶುಕ್ರನ ಪತ್ನಿಯೂ ಆಗಿ ದೇವಯಾನಿ ಎಂಬ ಮಗಳನ್ನೂ ಪಡೆದಳು!

ದೇವದಾನವರ ಯುದ್ಧವು ನಡೆಯುವಾಗ ಶುಕ್ರನಿಂದ ಮೃತ ಸಂಜೀವಿನಿ ವಿದ್ಯೆಯನ್ನು ಕಲಿಯಲು ಕಚನು ಬಂದು, ತನ್ನ ತಂದೆಗೆ ಶುಶ್ರೂಷೆಮಾಡಿದ ಕಾಲದಲ್ಲಿ ದೇವಯಾನಿ ಅವನನ್ನು ಪ್ರೇಮಿಸ ತೊಡಗಿದಳು.

ಕಚನನ್ನು ರಾಕ್ಷಸರು ಎಷ್ಟುಸಾರಿ ಕೊಂದರೂ, ಅವಳು ತನ್ನ ತಂದೆಯಿಂದ ಅವನನ್ನು ಬದುಕಿಸುತ್ತಾ ಬಂದಳು. ಹೀಗೆ ದೇವಯಾನಿಯ ಪುಣ್ಯದಿಂದ ಕಚನು ಎಷ್ಟೋಸಾರಿ ಸತ್ತು ಸತ್ತು ಬದುಕಿದನು. ಕಡೆಗೆ ರಾಕ್ಷಸರು ಮುಂದಾಲೋಚನೆಯಿಲ್ಲದೆ, ಕಚನು ಸತ್ತು ಶುಕ್ರನ ಹೊಟ್ಟೆಗೇ ಹೋಗುವಂತೆ ಮಾಡಿದರು. ಶುಕ್ರನು ಬೇರೆ ಉಪಾಯವಿಲ್ಲದೆ ಕಚನನ್ನು ತನ್ನ ಹೊಟ್ಟೆಯೊಳಗೇ ಬದುಕಿಸಿ, ಅಲ್ಲಿಯೇ ಮೃತ ಸಂಜೀವಿನಿಯನ್ನು ಕಲಿಸಿ, ಅವನು ಹೊಟ್ಟೆಯಿಂದ ಹೊರಬರುವಾಗ ತಾನು ಸತ್ತು, ಅವನಿಂದ ಮತ್ತೆ ಬದುಕಿದನು.

ಹೀಗೆ ಬಂದ ಕಾರ್ಯ ಮುಗಿಸಿಕೊಂಡ ಕಚನು, ತಂಗಿಗೆ ಸಮಾನಳೆಂದು ದೇವಯಾನಿಯನ್ನು ಮದುವೆಯಾಗಲು ನಿರಾಕರಿಸಿ ಹೊರಟುಹೋದನು.

ಶುಕ್ರನು ವೃಷಪರ್ವನೆಂಬ ದಾನವ ರಾಜನ ಆಶ್ರಯದಲ್ಲಿದ್ದನು. ವೃಷಪರ್ವನ ಮಗಳು ಶರ್ಮಿಷ್ಠೆಯೂ ದೇವಯಾನಿಯೂ ಸ್ನೇಹಿತೆಯರಾಗಿದ್ದರು.

ಒಂದು ದಿನ ಶರ್ಮಿಷ್ಠೆಯೂ ದೇವಯಾನಿಯೂ, ಇತರ ಗೆಳತಿಯರೊಂದಿಗೆ ಕೊಳದಲ್ಲಿ ಜಲಕ್ರೀಡೆಗಿಳಿದಾಗ, ತಮ್ಮ ಸೀರೆಗಳನ್ನು ತೀರದಲ್ಲಿಟ್ಟಿದ್ದರು.

ಆಗ ಗಾಳಿ ಬೀಸುತ್ತಿದ್ದುದರಿಂದ, ಅವರು ಸ್ನಾನಮಾಡುವಾಗ ತೀರದಲ್ಲಿದ್ದ ಬಟ್ಟೆಗಳೆಲ್ಲಾ ಒಂದರೊಡನೆ ಒಂದು ಬೆರೆತುಹೋದುವು. ಶರ್ಮಿಷ್ಠೆ ಮೇಲೆ ಬಂದು ಕೈಗೆ ಸಿಕ್ಕಿದ ಸೀರೆಯನ್ನು ಉಟ್ಟುಕೊಂಡಳು. ಅದು ದೇವಯಾನಿಯ ಸೀರೆ!

ತರುವಾಯ ದೇವಯಾನಿ ಮೇಲೆ ಬಂದು, "ನಾನು ಬ್ರಾಹ್ಮಣ ಸ್ತ್ರೀ ಮಾತ್ರವಲ್ಲದೆ ನನ್ನ ತಂದೆ ನಿನ್ನ ತಂದೆಗೆ ಕುಲಗುರು. ನೀನು ನನ್ನ ಸೀರೆ ಉಟ್ಟುಕೊಂಡು ನಿನ್ನದನ್ನು ನಾನು ಉಡಲು ಬಿಟ್ಟೆಯಾ? ಏನು ಗರ್ವ!" ಎಂದು ಜಗಳ ಕೆದರಿದಳು.

"ನಿನ್ನ ಜಂಬ ಸುಟ್ಟಿತು. ನನ್ನ ತಂದೆಯ ಕೈ ಕೆಳಗೆ ನಿನ್ನ ತಂದೆ ಒಬ್ಬರು ಸೇವಕರು! ಇಷ್ಟಕ್ಕೆ ನಿನ್ನ ಕಣ್ಣು ನೆತ್ತಿಗೇರಿತು!" ಎಂದಳು ಶರ್ಮಿಷ್ಠೆ. ಹೀಗೆ ಬಾಯಿಗೆ ಬಾಯಿ ಹತ್ತಿ, ಶರ್ಮಿಷ್ಠೆ ದೇವಯಾನಿಯನ್ನು ದಾರಿಯಲ್ಲಿದ್ದ ಒಂದು ಬಾವಿಗೆ ದೂಡಿ, ಗೆಳತಿಯರೊಂದಿಗೆ ತನ್ನ ಮನೆಗೆ ಹೋದಳು.

ದೇವಯಾನಿ ಬಾವಿಯಲ್ಲಿ ಅಳುತ್ತಿರಲು, ಬೇಟೆಗಾಗಿ ಬಂದಿದ್ದ ಯಯಾತಿ ರಾಜನು, ಬಾವಿಗೆ ಬಾಗಿ ಕೈ ಕೊಟ್ಟು, ಅವಳನ್ನು ಮೇಲಕ್ಕೆ ಎತ್ತಿಕೊಂಡನು. ಅಷ್ಟರಲ್ಲಿ ದೇವಯಾನಿಯನ್ನು ಹುಡುಕುತ್ತ, ಘೂರ್ಣಿಕಾ ಎಂಬ ಪರಿಚಾರಿಕೆ ಅಲ್ಲಿಗೆ ಬಂದಳು. ಆದರೆ ದೇವಯಾನಿ ಶರ್ಮಿಷ್ಠೆ ಇರುವ ನಗರಕ್ಕೆ ಹೋಗಲಾರೆನೆಂದು ಹಠ ಹಿಡಿದಳು. ಈ ಸಂಗತಿ ತಿಳಿದು ಶುಕ್ರನೂ ವೃಷಪರ್ವನ ನಗರದಿಂದ ಹೊರಟು ಹೋಗಲು ಸಿದ್ಧನಾದನು.

ಆಗ ವೃಷಪರ್ವನು ತನ್ನ ಮಗಳು ಮಾಡಿದ ತಪ್ಪನ್ನು ತಿಳಿದುಕೊಂಡು, ಅವಳನ್ನು ದೇವಯಾನಿಯ ಸೇವಕಿಯಾಗಿರುವಂತೆ ಶಾಸಿಸಿ ಕೊಟ್ಟುಬಿಟ್ಟನು.

ಯಯಾತಿ ತನ್ನ ಕೈ ಹಿಡಿದುದರಿಂದ, ತನ್ನ ಪಾಣಿಗ್ರಹಣವಾಯಿತೆಂದು ಹೇಳಿ, ಯಯಾತಿಯೇ ತನ್ನ ಗಂಡನೆಂದು ದೇವಯಾನಿ ವಾದಿಸಿ, ಅವನನ್ನೇ ಮದುವೆಯಾದಳು. ಅವಳ ಪರಿಚಾರಿಕೆಯಾಗಿ ಶರ್ಮಿಷ್ಠೆಯೂ ಹೋದಳು. ಆದರೆ ದೇವಯಾನಿ ಮಕ್ಕಳನ್ನೇ ಹಡೆಯಲಿಲ್ಲ.

ಯಯಾತಿ ಅವಳಿಗೆ ತಿಳಿಯದಂತೆ ಶರ್ಮಿಷ್ಠೆಯನ್ನು ಮದುವೆಯಾದನು. ಶರ್ಮಿಷ್ಠೆಗೆ ಮಕ್ಕಳು ಹುಟ್ಟಿದರು.

ಈ ಸಮಾಚಾರ ದೇವಯಾನಿಗೆ ಬಹಳ ಕಾಲದ ಮೇಲೆ ತಿಳಿಯಿತು. ಆಗ ಅವಳು ತುಂಬಾ ರೋಷದಿಂದ ತನ್ನ ತಂದಯೊಡನೆ ಗಂಡನ ಮೇಲೆ ದೂರು ಹೇಳಿದಳು.

ಶುಕ್ರನು ಯಯಾತಿಯನ್ನು ವೃದ್ಧನಾಗಿ ಹೋಗುವಂತೆ ಶಪಿಸಿಬಿಟ್ಟನು. ಹೀಗೆ ಕೆಡಿಸಲು ಬಂದವಳ ಸಂತತಿಯಿಂದ ಕೆಡುಕೇ ಸಂಭವಿಸಿತು.



# ಪರಸ್ಪರ ಹಿಡಿಸಿಕೊಂಡ ಕಳ್ಳರು

ಹಿಂದೆ ರಾಮಾಪುರದಲ್ಲಿ ಹಾಡು ಹಗಲೇ ವಿಚಿತ್ರ ರೀತಿಯ ಕಳ್ಳತನಗಳು ನಡೆಯುತ್ತಿದ್ದುವು. ರಾಜಭಟರಿಗೆ ಕಳ್ಳನ ಗುರುತು ಹಿಡಿಯಲು ಸಾಧ್ಯವಾಗಲೇ ಇಲ್ಲ. ಏಕೆಂದರೆ ಕಳ್ಳತನಗಳು ನಗರದ ಬೇರೆ ಬೇರೆ ಪ್ರಾಂತಗಳಲ್ಲಿ ಒಂದೇ ಕಾಲದಲ್ಲಿ ನಡೆಯುತ್ತಿದ್ದುವು. ಅಂತಹ ಮಾಯಾಮೋಡಿಯ ಕಳ್ಳನನ್ನು ಹೇಗೆ ಹಿಡಿಯುವುದೆಂದು ರಾಜಭಟರಿಗೆ ಗೊತ್ತಾಗಲಿಲ್ಲ.

ಅದಕ್ಕೆ ಕಾರಣವೇನೆಂದರೆ, ಆ ಊರಿನಲ್ಲಿ ಕಳ್ಳತನ ಮಾಡುವವರು ಇಬ್ಬರು ದೊಡ್ಡ ಕಳ್ಳರು; ಭೀಮಪ್ಪ, ಭರಮಪ್ಪ ಎಂಬವರು. ಇಬ್ಬರೂ ಚೋರ ವಿದ್ಯೆಯಲ್ಲಿ ಸಿದ್ಧಹಸ್ತರಾದುದರಿಂದ, ಇಬ್ಬರಿಗೂ ಜೋಡುಗಳ್ಳರಾಗಿ ಕೆಲಸ ಮಾಡಲು ಇಷ್ಟವಿರಲಿಲ್ಲ.

ಆದರೆ ಒಬ್ಬನು ಇನ್ನೊಬ್ಬನಿಗೆ ಸ್ಪರ್ಧಾಳುವಾಗಿದ್ದುದರಿಂದ, ಒಬ್ಬರನ್ನೊಬ್ಬರು ಹೇಗೆ ಅಡಗಿಸುವುದೆಂದು ಸಮಯ ಹೊಂಚು ಹಾಕಿ ನೋಡುತ್ತಿದ್ದರು.

ಕಳ್ಳನನ್ನು ಹಿಡಿಯಲು ತನಗೆ ಸಾಧ್ಯವಿಲ್ಲವೆಂದು ತೋರಿದ ಮೇಲೆ ರಾಜನು, ಕಳ್ಳನನ್ನು ಹಿಡಿದುಕೊಟ್ಟವರಿಗೆ ಹತ್ತು ಸಾವಿರ ವರಹ ಬಹುಮಾನ ಕೊಡುವುದಾಗಿ ಡಂಗುರ ಹೊಡೆಸಿದನು. ಕೂಡಲೇ ಭೀಮಪ್ಪನೂ, ಭರಮಪ್ಪನೂ ಮಾರುವೇಷದಲ್ಲಿ ರಾಜನ ಬಳಿಗೆ ಹೋಗಿ, ಒಬ್ಬನ ಗುರುತನ್ನು ಇನ್ನೊಬ್ಬನು ರಾಜನಿಗೆ ಹೇಳಿ ಬಿಟ್ಟರು. ಆ ವಿಧವಾಗಿ ಇಬ್ಬರೂ ಸಿಕ್ಕಿ ಬಿದ್ದರು. ಬಹುಮಾನ ಪಡೆಯುವವರು ಯಾರೂ ಇಲ್ಲದೆ ಹೋಯಿತು.





# ಹಾದಿ ಹೊಡಕ

**ಒಂ**ದು ನಗರಕ್ಕೆ ಸುಮಾರು ಹತ್ತು ಮೈಲು ದೂರದ ಒಂದು ಗ್ರಾಮದಲ್ಲಿ ರಘುಪತಿ ಎಂಬವನು ವಾಸವಾಗಿದ್ದನು. ಅವನ ಮನೆಯಲ್ಲಿ ಯಾವುದೋ ಒಂದು ಶುಭಕಾರ್ಯ ನಡೆಯಲಿರುವ ಸನ್ನಾಹಗಳು ಪ್ರಾರಂಭವಾಗಿದ್ದುವು. ಅದರಲ್ಲಿ ಭಾಗವಹಿಸಲಿಕ್ಕಾಗಿ ನಗರದಲ್ಲಿರುವ ರಘುಪತಿಯ ಗೆಳೆಯನಾದ ಶ್ರೀಕಂಠನು ಸಾಯಂಕಾಲದ ಹೊತ್ತಿನಲ್ಲಿ ಕುದುರೇ ಗಾಡಿ ಮಾಡಿಕೊಂಡು, ರಘುಪತಿಯ ಊರಿಗೆ ಹೊರಟನು.

ನಗರದಿಂದ ರಘುಪತಿಯ ಗ್ರಾಮಕ್ಕೆ ಹೋಗುವ ಬೀದಿಯಲ್ಲಿ ಒಂದು ಸಣ್ಣ ಕಾಡು ಪ್ರದೇಶವು ಅಡ್ಡ ಬರುತ್ತಿತ್ತು. ಹಿಂದೊಮ್ಮೆ ಆ ಕಾಡು ದಾರಿಯಲ್ಲಿ ರಘುಪತಿ ಪ್ರಯಾಣಮಾಡಿದಾಗ ಹಾದಿ ಹೊಡಕ ಕಳ್ಳನೊಬ್ಬ ಅಟಕಾಯಿಸಿ ಅವನಲ್ಲಿದ್ದುದನ್ನೆಲ್ಲ ದೋಚಿಕೊಂಡಿದ್ದನಂತೆ. ಅದು ಹೇಗೆ ನಡೆಯಿತೆಂಬುದನ್ನು ರಘುಪತಿ ಶ್ರೀಕಂಠನೊಂದಿಗೆ ಹೇಳಿದ್ದನು. ಅದೇನೆಂದರೆ,

ರಘುಪತಿ ಯಾವುದೋ ಕೆಲಸಗಳ ಮೇಲೆ ನಗರಕ್ಕೆ ಬಂದು, ಅವನ ಕೆಲಸಗಳೆಲ್ಲ ಮುಗಿಯುವಾಗ ಹೊತ್ತು ಮಾಲಿ ಹೋಯಿತು, ಕಡೆಗೆ ಒಂದು ಕುದುರೇ ಗಾಡಿಯನ್ನು ಮಾತಾಡಿ, ಅದರಲ್ಲಿ ತನ್ನ ಗ್ರಾಮಕ್ಕೆ ಹೊರಟನು. ಕಾಡು ದಾರಿಯಲ್ಲಿ ದಾರಿ ಬಾವಾಗಿ ತಿರುಗಿದ್ದ ಜಾಗದಲ್ಲಿ ಒಂದು ಮರದಕೊಂಬೆ ಅಡ್ಡ ಬಿದ್ದಿದ್ದಿತಂತೆ. ಗಾಡಿ ನಿಂತಿತು.

ಆಗ ಮರದ ಹಿಂದಿನಿಂದ ಮುಸುಗು ಮನುಷ್ಯನೊಬ್ಬ, ಹದನಾದ ಕತ್ತಿ ಹಿಡಿದುಕೊಂಡೇ ಬಂದು ರಘುಪತಿಯ ಕುತ್ತಿಗೆಗೆ ಅದನ್ನು ತಾಗಿಸಿ, "ಇರುವುದನ್ನೆಲ್ಲಾ ಕೊಟ್ಟುಬಿಡು, ಇಲ್ಲದಿದ್ದರೆ ಸಾಯುವಿ!" ಎಂದು ಗುರುಗುಟ್ಟಿ, ಎಲ್ಲಾ ಹಣವನ್ನೂ ಸುಲಿದುಕೊಂಡನು. ಕಡೆಗೆ ಗಾಡಿಯುವನ ಜೇಬಿನಲ್ಲಿದ್ದ ಹಣ ಕೂಡಾ ತೆಗೆದುಕೊಂಡು ಹೋದನಂತೆ.

"ಈ ರಾತ್ರಿಯಲ್ಲಿ ಪ್ರಯಾಣಮಾಡುವುದು ಬೇಡಾ ಅಂದೆ. ನೀವು ಕೇಳಲಿಲ್ಲ. ನನ್ನ ಮಗಳ ಮದುವೆಗಾಗಿ ಸೇರಿಸಿಟ್ಟಿದ್ದ ಐದು ನೂರನ್ನೂ ಕಳ್ಳ ಸುಲಿದುಕೊಂಡನಲ್ಲಾ!" ಎಂದು ಗಾಡಿಯುವನೂ ಗೋಳಾಡಿದನಂತೆ.

ರಘುಪತಿ ಅವನಿಗೆ ಸಮಾಧಾನ ಹೇಳಿ ಊರು ಸೇರಿದ ಮೇಲೆ, ಗಾಡಿಯುವನಿಗೆ ಐನೂರು ರೂಪಾಯಿ ಕೊಟ್ಟು, ಆ ರಾತ್ರಿ ಅವನಿಗೆ ಮನೆಯಲ್ಲೇ ಆಶ್ರಯ ಕೊಟ್ಟು ಕಳುಹಿಸಿದನಂತೆ.

**ಎಂ. ಕೆ. ಈಶ್ವರರಾವ್**

ಈ ಸಂಗತಿ ನಡೆದು ಒಂದು ವರ್ಷವಾಗಿತ್ತು. ಕತ್ತಲೆಯ ಹೊತ್ತಿನಲ್ಲಿ ಕುದುರೇ ಗಾಡಿಯಲ್ಲಿ ಪ್ರಯಾಣ ಮಾಡುವಾಗ ಶ್ರೀಕಂಠನಿಗೆ ಆ ಸಂಗತಿ ನೆನಪಿಗೆ ಬಂದು, "ದೇವರೇ ಗತಿ!" ಎಂದು ಕೊಳ್ಳುತ್ತಿದ್ದನು.

ಅಷ್ಟರಲ್ಲಿ ಗಾಡಿ ಅದೇ ಕಾಡಿನ ಹಾದಿಯ ಬಾವು ತಿರುಗುವಲ್ಲಿ ಬಂದು ಗಡಕ್ಕನೆ ನಿಂತಿತು. ದಾರಿಗೆ ಅಡ್ಡವಾಗಿ ಒಂದು ಮರದ ಕೊಂಬೆ! "ಏನಪ್ಪಾ ಇದೂ ದೇವರೇ!" ಎಂದು ಗಾಡಿಯವನೂ ಉದ್ಗರಿಸಿದ.

ಆಗ ಮರದ ಮರೆಯಿಂದ ಮುಸುಗಿನವನೊಬ್ಬ ಕೈಯಲ್ಲಿ ಹೊಳೆಯುವ ಕತ್ತಿಯೊಂದಿಗೆ ಬಂದು, ಶ್ರೀಕಂಠನ ಕಂಠಕ್ಕೆ ನೇರಾಗಿ ಕತ್ತಿಯನ್ನು ಆಡಿಸುತ್ತ, ಅವನ ಹತ್ತಿರ ಇರುವುದನ್ನೆಲ್ಲಾ ಕಿತ್ತು, ಗಾಡಿಯವನ ಜೇಬಿನಲ್ಲಿದ್ದುದನ್ನೂ ಎತ್ತಿಕೊಂಡು ಹೊರಡುವಾಗ, ಶ್ರೀಕಂಠನನ್ನು ನೋಡಿ, "ನಿನ್ನ ಕೈಯಲ್ಲಿರುವ ಆ ಗಂಟು ಎಂಥದು ?" ಎಂದು ಕೇಳಿದನು.

"ಸ್ವಲ್ಪ ಕೇಸರೀ ಬಾತು. ಮಕ್ಕಳಿಗಾಗಿ ಒಯ್ಯು ತ್ತಿದ್ದೇನೆ!" ಎಂದ ಶ್ರೀಕಂಠ. "ಭೇಷ್! ನನಗೂ ತುಂಬಾ ಹಸಿವೆ. ಕೇಸರೀ ಬಾತ್ ದೊಡ್ಡವರು ಕೂಡಾ ತಿನ್ನಬಹುದು" ಎಂದು ಕಳ್ಳನು ಆ ಗಂಟನ್ನು ಸಹಾ ಕಿತ್ತುಕೊಂಡು ಓಡಿಹೋದನು.

ಕಳ್ಳ ಓಡಿದ ಮೇಲೆ ಗಾಡಿಯವನು, "ಅಯ್ಯೋ! ನನ್ನ ಮಗಳ ಮದುವೆಗಾಗಿ ಸೇರಿಸಿಟ್ಟ ಐನೂರು ರೂಪಾಯಿ ಕೂಡಾ ಒಯ್ದನಲ್ಲಾ! ನಾನೇನು ಮಾಡಲಪ್ಪೋ!" ಎಂದು ಗೋಳಾಡಿದನು.

ಈ ಹಿಂದೆ ರಘುಪತಿಗಾದ ಅನುಭವವೇ ಪುನರಾ ವರ್ತನೆಯಾಗುವುದನ್ನು ನೋಡಿ, ಈ ಗಾಡಿಯವನು ಜೋಡಿ ಕಳ್ಳನೇ ಎಂದು ಶ್ರೀಕಂಠನಿಗೆ ಗೊತ್ತಾಯಿತು.

ಗಾಡಿಯವನು ಹಾದಿಗೆ ಅಡ್ಡ ಬಿದ್ದ ಕೊಂಬೆ ಯನ್ನು ಎತ್ತಿ ಆಚೆಗೆ ಹಾಕಿ, ಗಾಡಿಯನ್ನು ಮುಂದೆ ನಡೆಸಲು ನೋಡುವಾಗ ಶ್ರೀಕಂಠನು, "ಸ್ವಲ್ಪ ನಿಲ್ಲಪ್ಪಾ" ಎಂದನು.



"ಇನ್ನೂ ತಡಮಾಡಬೇಕೇ ಸ್ವಾಮಿ? ಇನ್ನೊಬ್ಬ ಕಳ್ಳ ಬಂದಗಿಂದಾನಲ್ಲ!" ಎಂದ ಗಾಡಿಗಾರ.

"ಬರಲಿ ಬಿಡು. ಇನ್ನು ನಮ್ಮ ಹತ್ತಿರ ದೋಚಿ ಕೊಳ್ಳಲಿಕ್ಕೆ ಏನಿದೆ? ಸ್ವಲ್ಪ ತಾಳು. ನನ್ನ ಹಣ ನಿನ್ನ ಹಣ ಎಲ್ಲಿಗೂ ಹೋಗದು. ಬೇಗದಲ್ಲೇ ನಮಗೆ ಸಿಗುತ್ತೆ." ಎಂದನು ಶ್ರೀಕಂಠ.

"ಅದು ಹೇಗೆ ಸಾಧ್ಯ ಸ್ವಾಮಿ?" ಎಂದ ಗಾಡಿ ಯವನು ಆಶ್ಚರ್ಯದಿಂದ.

"ಆ ಕಳ್ಳ, ಇಲ್ಲೇ ಎಲ್ಲೋ ಸಮೀಪವೇ ಸತ್ತು ಬಿದ್ದಾನು. ಈ ದಾರೀಲಿ ಹೀಗೇನಾದರೂ ಆಗುತ್ತೇ ಅಂತ ಗೊತ್ತಿದ್ದೇ ಹೊರಟಿದ್ದೇನೆ." ಎಂದು ನಗುತ್ತ ಶ್ರೀಕಂಠನು, "ಆ ಕೇಸರಿ ಬಾತು ಮಕ್ಕಳಿಗಾಗಿ ಕೊಂಡೊಯ್ಯುವ ತಿಂಡಿ ಅಲ್ಲಪ್ಪಾ, ಇಲಿ ಪಾಷಾಣ ಬೆರೆಸಿದ ತಿಂಡಿ. ನನ್ನ ಸ್ನೇಹಿತನ ಮನೆಯಲ್ಲಿ ತುಂಬಾ

ಇಲಿಗಳಂತೆ. ನಗರದಿಂದ ಘಾಟಾದ ಪಾಷಾಣ ತರಲು ಹೇಳಿದ್ದ. ಅದನ್ನೂ ತಿಂಡಿಗಷ್ಟು ಬೆರೆಸಿದ್ದೆ. ರಾತ್ರಿ ಪ್ರಯಾಣದಲ್ಲಿ ಅಪದ್ರುಕ್ಷೆಯಾಗಿರಲೀ ಅಂತ. ಹಸಿವೇ ಎಂದ ಕಳ್ಳ ಇಲ್ಲೇ ಎಲ್ಲಾದರೂ ಅದನ್ನು ತಿಂದು ಸತ್ತು ಬೀಳುತ್ತಾನೆ. ನಾವು ಹೋಗಿ ನಮ್ಮ ನಮ್ಮ ಹಣ ತಂದುಕೊಳ್ಳೋಣ. ಬಾ" ಎಂದನು.

ಇದನ್ನು ಕೇಳಿ ಗಾಡಿಯವನು ಹೆದರಿ ಬೆವತು ನಡುಗುತ್ತ, "ರಂಗೋ! ಅದನ್ನು ತಿನ್ನಬೇಡ್ವೋ!" ಎಂದು ಗಟ್ಟಿಯಾಗಿ ಅರಚುತ್ತ ಗಾಡಿಯಿಂದ ಕೆಳಗೆ ಹಾರಿದನು. ಶ್ರೀಕಂಠನು ಅವನ ಕುತ್ತಿಗೆಯ ಹಿಂದೆ ಹಿಡಿದು, "ಕಳ್ಳ ಭಡವಾ! ನೀನೇ ಹಾದಿ ಹೊಡಕ್ನ ಹೌದಾ?" ಎಂದನು ಜೋರಿನಿಂದ.

"ಅಯ್ಯೋ! ನನ್ನ ಬುದ್ಧಿ ಮಣ್ಣು ತಿಂದು ಈ ಕೆಲಸ ಶುರುಮಾಡಿದೆವು! ನನ್ನ ಬಿಡೀ! ನನ್ನ ಮಗ ಅದನ್ನು ತಿಂದು ಸಾಯುವನಲ್ಲಾ!" ಎಂದನು ಗಾಡಿಯವ ತಟಪಟಾಯಿಸುತ್ತ.

ಇಬ್ಬರೂ ಸಮೀಪದಲ್ಲಿದ್ದ ಒಂದು ಗುಡಿಸಲಿಗೆ ಓಡಿದರು. ಗಾಡಿಯವನು ಅವಸರವಸರವಾಗಿ ಬಾಗಿಲು ದೂಡಿ ಒಳಗೆ ಧಾವಿಸಿದನು. ಅವನ ಹಿಂದೆಯೇ ಶ್ರೀಕಂಠನೂ ಒಳಗೆ ಹೊಕ್ಕ.

ಒಳಗೆ ಗಾಡಿಯವನ ಮಗ ರಂಗ ಕೇಸರಿ ಬಾತ್ ಅರ್ಧದಷ್ಟು ತಿಂದು, ಇನ್ನೂ ತಿನ್ನುತ್ತಿದ್ದ.

"ಅಯ್ಯಯ್ಯೋ! ತಿಂದುಬಿಟ್ಟೆಯೇನೋ! ಅದರಲ್ಲಿ ಇಲಿ ಪಾಷಾಣವಿದೆಯೋ!" ಎಂದು ಗಾಡಿಯುವನು ಅಳುಗೊರಲಿನಿಂದ ಕೂಗಿದ. ರಂಗನೂ ತಟಸ್ಥನಾಗಿ ಬೆವರ ತೊಡಗಿದ.

"ಅತ್ತರೆ ವಿಷ ನಿವಾರಣೆಯಾಗದು. ಬೇಗ ಹೊರಡಿ! ವೈದ್ಯರಲ್ಲಿಗೆ ಹೋಗಿ ನಿವಾರಣೆ ಮಾಡಿಸ ಬೇಕು. ಆ ಮೇಲೆ ಅಳಲಿಕ್ಕೆ ಬೇಕಾದಷ್ಟು ಹೊತ್ತಿದೆ" ಎಂದು ಶ್ರೀಕಂಠ ಅವಸರಪಡಿಸಿದ.

ಸಮಾಚಾರ ತಿಳಿದ ರಂಗನಿಗೆ ಭೀತಿಯಿಂದ ನಿಜಕ್ಕೂ ಹೊಟ್ಟೆಯೊಳಗೆ ಏನೋ ತಿರುಗಲು ಶುರು ವಾಯಿತು. ಒಮ್ಮೆಗೇ ನಿಸ್ರಾಣನಂತಾದನು.

ಮೂವರೂ ಗಾಡಿಯಲ್ಲಿ ರಘುಪತಿಯ ಮನೆಗೆ ತಲಪಿದರು. ಶ್ರೀಕಂಠನು ಕಳ್ಳ ತಂದೆ ಮಗಂದಿರನ್ನು ಹೊರಗೋಣೆಯಲ್ಲಿ ಕೂಡಿಸಿ "ಇಲ್ಲೇ ಇರಿ. ವೈದ್ಯರಿಗೆ ಸುದ್ದಿ ಕಳಿಸುತ್ತೇವೆ" ಎಂದು ಒಳಗೆ ಹೋಗಿ ರಘುಪತಿ ಯೊಂದಿಗೆ ನಡೆದ ಸಂಗತಿಯನ್ನೆಲ್ಲಾ ಹೇಳಿದನು.

ವೈದ್ಯರನ್ನು ಎದುರು ನೋಡುವ ತಂದೆ ಮಗಂದಿರ ಮುಂದೆ ರಕ್ಷಕಭಟರು ಬಂದು ಅವರನ್ನು ಹಿಡಿದು ಕೊಂಡು ಹೋದರು. ಹೋಗುವಾಗ ಶ್ರೀಕಂಠನು ಅವರೊಂದಿಗೆ, "ಕೇಸರೀ ಬಾತಿನಲ್ಲಿ ಯಾವ ವಿಷವೂ ಇಲ್ಲ. ನಿಮ್ಮ ಹಾದಿ ಹೊಡಕ ರೋಗಕ್ಕೆ ಚಿಕಿತ್ಸೆ ಮಾಡುವ ವೈದ್ಯರು ಇವರೇ!" ಎಂದು ಹೇಳಿದನು.



# ಪರೀಕ್ಷೆ

ವರಾಹಗುಪ್ತರು ದೊಡ್ಡ ವಜ್ರಗಳ ವ್ಯಾಪಾರ ಮಾಡುವವರು. ಅವರಿಗೆ ವಯಸ್ಸಾಗಿತ್ತು. ತನ್ನ ಇಬ್ಬರು ಮಗಂದಿರಲ್ಲಿ ಬುದ್ಧಿವಂತನಾದವನಿಗೆ ವ್ಯಾಪಾರದ ಜವಾಬ್ದಾರಿಯನ್ನು ಒಪ್ಪಿಸಲು ನಿರ್ಧರಿಸಿದರು.

ಅದಕ್ಕಾಗಿ ಇಬ್ಬರಿಗೂ ಒಂದೊಂದು ಅಗ್ಗದ ವಜ್ರವನ್ನು ಕೊಟ್ಟು, "ಇವು ಉತ್ತಮ ಜಾತಿಯ ವಜ್ರಗಳು, ಮಾರಿ ಹಣ ತನ್ನಿ" ಎಂದು ಹೇಳಿ ಕಳುಹಿಸಿದರು.

ದೊಡ್ಡವನು ಹಿಂದಿರುಗಿ ಬಂದು, "ಯಾರೋ ನಿಮ್ಮನ್ನು ಮೋಸ ಪಡಿಸಿದ್ದಾರೆ. ಅದು ನಕಲೀ ವಜ್ರವಂತೆ. ಹತ್ತು ವರಹಗಳಿಗಿಂತ ಹೆಚ್ಚು ಸಿಗಲಿಲ್ಲ" ಎಂದನು.

ಎರಡನೆಯವನು ಬಂದು, "ಅದು ನಕಲೀ ವಜ್ರ. ನೀವು ತಪ್ಪಾಗಿ ಕೊಟ್ಟಿರಬೇಕು. ಆದರೂ ಅದರ ನಮೂನೆ ದೊಡ್ಡದೆಂದು ಬಣ್ಣಿಸಿ ಹೇಳಿ, ನೂರು ವರಹಗಳಿಗೆ ಮಾರಿದೆ" ಎಂದನು.

"ನೀವು ಮಾರಿದುದು ಬೆಲೆ ಬಾಳುವ ವಜ್ರಗಳೇ. ನೋಡಿ, ಇವು ನಕಲೀ ವಜ್ರಗಳು. ಈಗ ಇವುಗಳನ್ನು ಒಯ್ದು ಮಾರಿಕೊಂಡು ಬನ್ನಿ." ಎಂದು ಹೇಳಿ ಅವರಿಬ್ಬರ ಕೈಗೆ ಒಂದೊಂದು ಒಳ್ಳೇ ವಜ್ರವನ್ನು ಕೊಟ್ಟನು ತಂದೆ. ಇಬ್ಬರೂ ಹೊರಟು ಹೋದರು.

ದೊಡ್ಡವನು ಹಿಂದಿರುಗಿ ಬಂದು, "ಮೊದಲು ನೀವು ಕೊಟ್ಟ ನಿಜವಾದ ವಜ್ರಕ್ಕೆ ಎರಡನೇ ಸಾರಿ ಕೊಟ್ಟ ನಕಲೀ ವಜ್ರವನ್ನು ಬದಲಾವಣೆ ಮಾಡಿ ನಷ್ಟ ತುಂಬಿ ಬರುವ ಹಾಗೆ ಮಾರಿದೆನಪ್ಪಾ" ಎಂದು ಮೊದಲು ಒಯ್ದ ನಕಲೀ ವಜ್ರವನ್ನು ತಂದೆಗೆ ಕೊಟ್ಟನು.

ಎರಡನೆಯವನು ಬಂದು, "ನೀವು ಕೊಟ್ಟದ್ದು ಅಸಲು ವಜ್ರ! ಅದನ್ನು ಹತ್ತು ಸಾವಿರಕ್ಕೆ ಮಾರಿದೆ. ಯಾವುದಕ್ಕೂ ಒಳ್ಳೆಯದೆಂದು, ಮೊದಲು ಮಾರಿದ ವಜ್ರಕ್ಕೆ ಮತ್ತೊಂದು ಹತ್ತು ವರಹ ಹೆಚ್ಚಾಗಿ ಕೊಟ್ಟು, ಅದನ್ನು ಕೂಡಾ ವಾಪಾಸು ತಂದು ಬಿಟ್ಟೆ" ಎಂದನು.

ವರಾಹಗುಪ್ತನು ತನ್ನ ವ್ಯಾಪಾರವನ್ನು ಎರಡನೇ ಮಗನಿಗೇ ವಹಿಸಿಕೊಟ್ಟನು.





# ಪಂಡಿತನ ಶಿಷ್ಯರು

ಒಂದು ಊರಿನಲ್ಲಿ ಒಬ್ಬ ಪಂಡಿತನಿದ್ದನು. ಅವನು ಮನೆಯಲ್ಲಿ ಅನೇಕ ಶಿಷ್ಯರಿಗೆ ಪಾಠ ಹೇಳಿ ಕೊಡುತ್ತಿದ್ದನು. ಆ ಪಂಡಿತನ ಮನೆಯಲ್ಲಿ ಗೋವಿಂದ ನೆಂಬವನು ಕೆಲಸದಾಳಾಗಿ ಸೇರಿದ್ದನು. ಈ ಗೋವಿಂದನ ಮನಸ್ಸಿನಲ್ಲಿ ತಾನು ಕೂಡಾ ಓದಿಕೊಳ್ಳಬೇಕೆಂಬ ಆಸೆ ಬಹಳ ತೀವ್ರವಾಗಿತ್ತು. ಆದುದರಿಂದ ಅವನು ಆಗಾಗ ತನ್ನ ಕೆಲಸವನ್ನು ಮರೆತು, ಪಂಡಿತನು ತನ್ನ ಶಿಷ್ಯರಿಗೆ ಹೇಳುವ ಪಾಠಗಳನ್ನು ಲಕ್ಷ್ಯಗೊಟ್ಟು ಕೇಳುತ್ತ ನಿಲ್ಲುವನು.

ಒಂದು ದಿನ ಪಂಡಿತನು ಶಿಷ್ಯರಿಗೆ ಪಾಠ ಪ್ರವಚನ ನಡೆಸುವಾಗ, ಗೋವಿಂದನು ಮಾಡಬೇಕಾದ ಕೆಲಸಗಳನ್ನು ಮರೆತು ನಿಂತಿರುವುದನ್ನು ನೋಡಿ, ಪಂಡಿತನ ಪತ್ನಿ ಅವನನ್ನು ಬಾಯಿಗೆ ಬಂದ ಹಾಗೆ ಬೈದಳು.

ಅದನ್ನು ಕೇಳಿ ಪಂಡಿತನು ಈಚೆಗೆ ಬಂದು ಗೋವಿಂದನನ್ನು ನೋಡಿ, "ಮಾಡುವ ಕೆಲಸ ಬಿಟ್ಟು ಏನನ್ನು ಕೇಳುತ್ತಾ ನಿಂತೆ?" ಎಂದು ವಿಚಾರಿಸಿದನು.

"ನನಗೆ ಕೂಡಾ ಓದುವ ಆಸೆ. ನಿಮ್ಮ ಪಾಠವನ್ನೇ ಕೇಳುತ್ತಾ ನಿಂತೆ ಸ್ವಾಮಿ" ಎಂದ ಗೋವಿಂದ.

"ನಿನ್ನ ಆಸೆ ಒಳ್ಳೆಯದೇ. ಆದರೆ ನಿನಗೆ ವಿದ್ಯೆ ಕಲಿಯಲು ತಕ್ಕ ಅರ್ಹತೆ ಉಂಟೇನು? ಈಗ ನಾನು ಏನು ಪಾಠ ಹೇಳಿದೆನೆಂದು ಹೇಳು ನೋಡುವಾ. ಅದನ್ನು ಹೇಳಿದೆಯಾದರೆ ನಿನ್ನನ್ನು ನನ್ನ ಶಿಷ್ಯರ ಜತೆಯಲ್ಲಿ ಸೇರಿಸಿಕೊಳ್ಳುತ್ತೇನೆ" ಎಂದು ಪಂಡಿತನು ಅವನಿಗೆ ಹೇಳಿದನು.

ಅವನು ಹಾಗೆ ಹೇಳಲು ಕಾರಣವಿದ್ದಿತು. ಆ ದಿನ ಅವನು ಬೋಧಿಸುತ್ತಿದ್ದ ವಿಷಯವು ಬಹಳ ಕಠಿನವಾಗಿತ್ತು. ಅದನ್ನು ಕೇಳುತ್ತಿದ್ದ ಹುಡಗರಲ್ಲಿ ಒಬ್ಬನಿಗೂ ಅದಿನ್ನೂ ಪೂರ್ತಿ ಅರ್ಥವಾಗಿಲ್ಲ. ಆದುದರಿಂದ ಗೋವಿಂದನಿಗಂತೂ ಅದು ಸ್ವಲ್ಪವೂ ಅರ್ಥವಾಗದೆಂದು ಅವನು ಊಹಿಸಿದ್ದನು.

ಆದರೆ ಗೋವಿಂದನು ಅದನ್ನು ಅರ್ಥಮಾಡಿಕೊಂಡು, ತಾನು ಕೇಳಿದುದನ್ನು ಒಂದು ಚೂರು ಸಹಾ ತಪ್ಪದಂತೆ ತಿರುಗಿ ಹೇಳಿದನು.

ಪಂಡಿತನು ಅವನ ಗ್ರಹಣ ಶಕ್ತಿಯನ್ನು ಮೆಚ್ಚಿಕೊಂಡು, ಆ ದಿನದಿಂದ ಅವನನ್ನು ತನ್ನ ಶಿಷ್ಯರಲ್ಲಿ ಒಬ್ಬನಾಗಿ ಸೇರಿಸಿಕೊಂಡನು. ಬೇಗದಲ್ಲೇ ಗೋವಿಂದನು ಪಂಡಿತನ ಇತರ ಶಿಷ್ಯರನ್ನೆಲ್ಲಾ ಮೀರಿಸಿದ

ವಿದ್ಯಾರ್ಥಿಯಾದನು. ಹಾಗಿದ್ದೂ ಸ್ವಲ್ಪವೂ ಗರ್ವ ಪಡದೆ, ಆ ಮನೆಯಲ್ಲಿ ತಾನು ಮಾಡುತ್ತಿದ್ದ ಕೆಲಸಗಳನ್ನು ಕೂಡಾ ಮಾಡಿಕೊಂಡೇ ಇದ್ದನು. ವಿದ್ಯೆ ಕಲಿಯುವುದರಿಂದ ಕೆಲಸಗಳನ್ನು ಕೀಳಾಗಿ ನೋಡುವ ಭಾವನೆ ಅವನಲ್ಲಿ ಸ್ವಲ್ಪವೂ ಇರಲಿಲ್ಲ.

ಅವನ ಮೇಲೆ ಇತರ ಶಿಷ್ಯರಿಗೆ ಅಸೂಯೆ ಹುಟ್ಟಿತು. ಅವರು ತಮ್ಮ ಅಸೂಯೆಯನ್ನು ಗುರುವಿನೊಂದಿಗೂ ಹೇಳಿಕೊಂಡರು. ಅದಕ್ಕೆ ಪಂಡಿತನು, "ನಾನೇನು ಮಾಡಲಿ ? ನಿಮಗೂ ಅವನಿಗೂ ಒಂದೇ ವಿಧವಾಗಿ ಕಲಿಸುತ್ತಿದ್ದೇನೆ. ಅವನು ಸರಸ್ವತಿಯ ಅಪರಾವತಾರದಂತಿದ್ದಾನೆ. ನನ್ನನ್ನೇ ಮಿಂಚಿ ಹೋಗುವ ಹಾಗೆ ಅವನ ಪ್ರತಿಭೆಯಿದೆ. ಅದು ನನಗೂ ಹೆಮ್ಮೆಯೆಂದೇ ತಿಳಿಯುತ್ತೇನೆ" ಎಂದನು ಪಂಡಿತ.

ವಿದ್ಯಾಭ್ಯಾಸಮಾಡುವಾಗಲೇ ಗೋವಿಂದನಿಗೆ ಕವಿತ್ವ ಬರೆಯುವ ಅಭ್ಯಾಸ ಹತ್ತಿಕೊಂಡಿತು. ಚೆನ್ನಾಗಿರುವ ಅವನ ಕವಿತ್ವಗಳಿಗೆ ಬಹಳ ಖ್ಯಾತಿಯೂ ಬಂದಿತು. ದೊಡ ದೊಡ್ಡವರು ಅವನನ್ನು ತಮ್ಮ ಮನೆಗಳ ವಿಶೇಷಗಳಿಗೆ ಆಹ್ವಾನಿಸಿ, ಕವಿತಾ ಗೋಷ್ಠಿ ನಡೆಸಿ ಸತ್ಕರಿಸಲಿಕ್ಕೂ ತೊಡಗಿದರು.

ಇದನ್ನೆಲ್ಲ ನೋಡಿ ಪಂಡಿತನ ಶಿಷ್ಯರಿಗೆ ಕಣ್ಣು ಕೆಂಪು ಕೆಂಪಾಗುತಿತ್ತು. ಇದು ಸಾಲದಂತೆ ಗೋವಿಂದನು ಒಂದು ನಾಟ್ಯಶಾಲೆಯವರ ಕೋರಿಕೆಯಂತೆ ಅವರಿಗೊಂದು ನಾಟಕ ಬರೆದುಕೊಟ್ಟನು. ಅದನ್ನು ಪ್ರದರ್ಶಿಸಿದಾಗ ನೋಡಿದವರೆಲ್ಲಾ ಅತ್ಯದ್ಭುತವೆಂದು ಪ್ರಶಂಸಿಸಿದರು. ಆಗಿನಿಂದ ಗೋವಿಂದನು ಸಂಸ್ಕೃತದಲ್ಲಿ ಚೆನ್ನಾಗಿ ನುರಿತವನಾಗಿ, ಅನೇಕ ಸಂಸ್ಕೃತ ನಾಟಕಗಳನ್ನು ಬರೆದನು. ಅವುಗಳಿಗೆ ಪುಷ್ಕಳವಾಗಿ ಹಣವೂ ಗೌರವವೂ ಬಂದಿತು.

ಹೀಗೆ ಪಂಡಿತ ಗುರುವಿನ ಹೆಸರನ್ನು ಎತ್ತಿ ನಿಲ್ಲಿಸಿದ ಶಿಷ್ಯ ಪ್ರವರನು ಗೋವಿಂದನೊಬ್ಬನೇ ಆದನು. ಉಳಿದ ಶಿಷ್ಯರಲ್ಲಿ ಒಬ್ಬನಾದರೂ ಪ್ರಯೋಜಕ ನೆನ್ನಿಸಿಕೊಳ್ಳಲಿಲ್ಲ.

ಒಂದುದಿನ ಅವರೆಲ್ಲಾ ಒಂದಾಗಿ, "ಸೊಂಟ ಬಗ್ಗಿಸಿ ಕೆಲಸಮಾಡಿ ಬದುಕ ಬೇಕಾಗಿದ್ದವನು, ನಮ್ಮ



ಪಾಪದ ಗುರುಗಳ ಸಲಿಗೆಯಿಂದಾಗಿ ಮಹಾಕವಿಯಾಗಿ ಕುಳಿತುಬಿಟ್ಟ. ನಮಗೇನೋ ಕವಿತ್ವದ ಹುಚ್ಚು ಹತ್ತಲಿಲ್ಲ. ಇದನ್ನು ನೋಡಿ ಗೋವಿಂದನು ಇನ್ನಷ್ಟು ಗರ್ವದಿಂದ ಬೀಗುತ್ತಾನೆ. ಅವನ ಗರ್ವವನ್ನು ಅಡಗಿಸ ಬೇಕಾದರೆ ; ಿವು ಬೇರೆ ಪ್ರಾಂತಗಳಿಂದ. ಕವಿಗಳನ್ನೋ ಕಾವ್ಯಗಳನ್ನೋ ತಂದು ಇಲ್ಲಿ ಪ್ರದರ್ಶಿಸಬೇಕು, ಸ-ಿಕರಮಾಡಬೇಕು " ಎಂದುಕೊಂಡರು.

ಈ ಯೋಜನೆಯಂತೆ ಕೆಲವು ಶಿಷ್ಯರು ಕರ್ನಾಟಕ ಪ್ರಾಂತಕ್ಕೆ ತೆರಳಿದರು. ಆ ದಿನಗಳಲ್ಲಿ ಕರ್ನಾಟಕದಲ್ಲಿ ನಾಟಕಗಳಿಗೆ ಬಹಳ ಪ್ರಚಾರವಿದ್ದಿತು. ಅಲ್ಲಿಯ ಪ್ರಜೆಗಳು ನೋಡಿ ಸಂತೋಷಿಸಿ ಆದರಿಸಿದ ನಾಟಕ ಗಳಲ್ಲಿ ಕೆಲವು ತುಂಬಾ ಕೀರ್ತಿವಂತವಾಗಿದ್ದುವು. ಅಂತಹ ನಾಟಕ ರಚನೆಗಳಲ್ಲಿ ಕೀರ್ತಿಗಳಿಸಿಕೊಂಡ ನಾಟಕ ಕರ್ತರಲ್ಲಿ ಶ್ರೇಷ್ಠನಾದವನು ಭದ್ರುಕವಿ.

ಪಂಡಿತನ ಶಿಷ್ಯರು ಭದ್ರುಕವಿಯನ್ನು ಸಂಧಿಸಿ, "ನಿಮ್ಮ ದೇಶದಲ್ಲಿ ನಿಮ್ಮ ನಾಟಕಗಳೆಂದರೆ ಎಲ್ಲರೂ ತುಂಬಾ ಅಭಿಮಾನಿಸುತ್ತಾರೆಂದು ಕೇಳಿದ್ದೇವೆ. ಇಲ್ಲಿ ನಡೆದ ಕೆಲವು ನಾಟಕ ಪ್ರದರ್ಶನಗಳನ್ನು ನಾವೂ ನೋಡಿದ್ದೇವೆ. ತಾವು ಅದನ್ನು ಸಂಸ್ಕೃತದಲ್ಲಿ ಅನುವಾದಮಾಡಿ ಕೊಟ್ಟಿರಾದರೆ, ಅದನ್ನು ನಮ್ಮ ದೇಶದಲ್ಲಿ ಪ್ರದರ್ಶಿಸುತ್ತೇವೆ. ನೀವೂ ಬರಬೇಕು. ನಿಮಗೆ ನಮ್ಮ ದೇಶದಲ್ಲಿ ಕೂಡಾ ಅಖಂಡ ಖ್ಯಾತಿ ಬರುತ್ತದೆ!" ಎಂದರು. ಭದ್ರುಕವಿ ಅವರಿಗೆ ಧನ್ಯವಾದಗಳನ್ನು ಹೇಳಿ, "ನನ್ನ ನಾಟಕಗಳಿಗೆಲ್ಲಾ ಸಂಸ್ಕೃತದಲ್ಲಿ ಮಾತೃಕೆಗಳಿವೆ. ನಾನು ಅವುಗಳನ್ನು ಕನ್ನಡದಲ್ಲಿ ಭಾಷಾಂತರಿಸಿ ಬರೆದೆನು, ಅಷ್ಟೇ" ಎಂದನು.

"ಸಂಸ್ಕೃತದಲ್ಲಿ ಅದನ್ನು ಬರೆದ ಮಹಾಕವಿ ಯಾರು ?" ಎಂದು ಪಂಡಿತನ ಶಿಷ್ಯರು ಕೇಳಿದರು.

"ಆ ಮಹಾಕವಿ ಇರುವ ನಗರ ಉಜ್ಜಯಿನಿ. ಆತನ ಹೆಸರು ಗೋವಿಂದ." ಎಂದನು ಭದ್ರುಕವಿ.

ಇದನ್ನು ಕೇಳಿ ಪಂಡಿತನ ಶಿಷ್ಯರಿಗೆ ಮುಖಕ್ಕೆ ಹೊಡೆದಷ್ಟು ಅವಮಾನವಾಯಿತು. ಇತರ ದೇಶಗಳ ಕವಿ ಪಂಡಿತರೂ ಪ್ರಜೆಗಳೂ, ಗೋವಿಂದನ ನಾಟಕ ಗಳನ್ನು ಭಾಷಾಂತರಮಾಡಿಕೊಂಡು ಮೆಚ್ಚಿ ಆನಂದಿಸಿ ಕೊಂಡಿರುವಾಗ, ತಾವು ಆ ನಾಟಕಗಳನ್ನು ಬಿಟ್ಟು ಕೊಟ್ಟು ದ್ವೇಷಿಸಿ, ಇತರ ದೇಶಗಳಲ್ಲಿ ತಿರುಗುತ್ತಿದ್ದೇವೆ! ತಮ್ಮ ಅಸೂಯೆ ಎಂತಹ ಹೇಯ ಕೆಲಸ ಗಳನ್ನು ಮಾಡಿಸುತ್ತದೆ! ಛೀ ಛೀ! ಎಂದು ಅವರು ತಮ್ಮನ್ನು ತಾವೇ ತುಚ್ಛೀಕರಿಸಿ ಬುದ್ಧಿ ತಂದು ಕೊಂಡು, ತಮ್ಮ ನಗರಕ್ಕೆ ಹಿಂದಿರುಗಿದರು. ಅವರ ದ್ವೇಷಾಸೂಯೆಗಳು ಪೂರ್ತಿ ತಣ್ಣಗಾಯಿತು. ಗೋವಿಂದನ ಮೇಲೆ ಅಭಿಮಾನವೂ ಮೆಚ್ಚುಗೆಯೂ ಉಂಟಾಯಿತು ಅವರಲ್ಲಿ.



# ಪಾಪ ವಿಮೋಚನೆ

ಒಂದು ಊರಿನಲ್ಲಿ ಸಿಂಗಣ್ಣನೆಂಬ ಕಳ್ಳನು, ತಾನು ತುಂಬಾ ಪಾಪ ಮಾಡಿದೆನೆಂದು ಪಶ್ಚಾತ್ತಾಪ ಪಟ್ಟನು. ತನ್ನ ಪಾಪಕ್ಕೆ ಪರಿಹಾರವೇನೆಂದು ಆಲೋಚಿಸುವಾಗ, ಒಬ್ಬ ಠಕ್ಕ ಸ್ವಾಮಿಗಳ ವೇಷದಲ್ಲಿ ಆ ಊರಿಗೆ ಬಂದ. ಅವನು ತನ್ನ ಬೋಧನೆಗಳನ್ನು ಕೇಳಲು ಬಂದ ಗ್ರಾಮಸ್ಥರೊಂದಿಗೆ, "ಭಕ್ತರೇ, ಮನುಷ್ಯರು ಏತಕ್ಕಾಗಿ ಪಾಪ ಮಾಡುತ್ತಾರೆ? ತಮ್ಮ ಅಗತ್ಯಗಳನ್ನು ತೀರಿಸಿಕೊಳ್ಳಲಿಕ್ಕಾಗಿಯೇ! ಹಾಗೆ ಮಾಡಿದ ಪಾಪಕ್ಕೆ ಪರಿಹಾರ ಏನೆಂದರೆ, ತಮ್ಮ ಅಕ್ರಮವಾದ ಸಂಪಾದನೆಯ ಅರ್ಧವನ್ನು ದೇವರ ಕಾರ್ಯಗಳಿಗೆ ಕೊಟ್ಟರೆ ತೀರಿತು. ಮೋಸಗಾರರಿಗೂ ಕಳ್ಳರಿಗೂ ಪಾಪ ವಿಮೋಚನೆಯಾಗಲಿಕ್ಕಾಗಿ ಇಲ್ಲಿ ಒಂದು ಹುಂಡಿಯನ್ನು ಇರಿಸಿದ್ದೇವೆ. ನಿಮ್ಮ ಅನ್ಯಾಯದ ಸಂಪಾದನೆಯ ಅರ್ಧವನ್ನು ಇದರಲ್ಲಿ ಹಾಕಿ ಪಾಪಗಳಿಂದ ಮುಕ್ತರಾಗಿರಿ. ಈ ಹುಂಡಿಯಲ್ಲಿರುವ ಹಣವು ದೇವರ ಕಾರ್ಯಗಳಿಗೇ ಮೀಸಲಾಗಿರುತ್ತದೆಂದು ತಿಳಿಯಿರಿ." ಎಂದು ಬೋಧಿಸಿದನು.

ಅನೇಕರು ತಮ್ಮ ಪಾಪ ವಿಮೋಚನೆಗಾಗಿ ತಾವು ಅನ್ಯಾಯವಾಗಿ ಸಂಪಾದಿಸಿದ ಹಣದ ಅರ್ಧವನ್ನು ಸ್ವಾಮಿಗಳ ಹುಂಡಿಗೆ ಹಾಕಿದರು.

ಮರುದಿನ ಬೆಳಿಗ್ಗೆ ಸ್ವಾಮಿಗಳ ಶಿಷ್ಯರು ಹುಂಡಿಯನ್ನು ತೆರೆದು ನೋಡುವಾಗ ಅದರೊಳಗೆ ಒಂದು ಚೀಟಿ ಇದ್ದಿತು. ಅದರಲ್ಲಿ ಹೀಗಿತ್ತು:

"ಸ್ವಾಮಿ, ನನ್ನ ಅಗತ್ಯಕ್ಕಾಗಿ ನಾನು ಈ ಹುಂಡಿಯಲ್ಲಿದ್ದುದನ್ನೆಲ್ಲಾ ಕದ್ದುಕೊಂಡು, ಅದರಲ್ಲಿಯ ಅರ್ಧವನ್ನು ಮತ್ತೆ ಹುಂಡಿಗೆ ಹಾಕಿದ್ದೇನೆ. ಅದನ್ನು ದೇವರ ಕಾರ್ಯಗಳಿಗೆ ವಿನಿಯೋಗಿಸಿ ನನಗೆ ಪಾಪ ವಿಮೋಚನೆ ಕೊಡಿಸಿರಿ—ಸಿಂಗಣ್ಣ."

ಇದನ್ನು ಓದಿ ಕಳ್ಳನನ್ನು ಚೇಳು ಕುಟುಕಿದಂತಾಯಿತು, ಆ ಕಳ್ಳ ಸ್ವಾಮಿಗೆ!






ದಾಸಯ್ಯ ಎಂಬವರು ಊರೊಳಗೆಲ್ಲಾ ದೊಡ್ಡ ಆಸ್ತಿವಂತರಾಗಿದ್ದರು. ಅವರು ತಮ್ಮ ಮಗಳ ಮದುವೆಯನ್ನು ತಮ್ಮ ಅಂತಸ್ತಿಗೆ ತಕ್ಕ ಅದ್ದೂರಿಯಾಗಿ ಮಾಡಬೇಕಾಗಿತ್ತು. ಅದಕ್ಕಾಗಿ ಅವರು ನಗರದಲ್ಲಿ ಪ್ರಸಿದ್ಧ ನಗಗಳ ವರ್ತಕರಾದ ಕೃಷ್ಣಸ್ವಾಮಿಯ ಹತ್ತಿರ ಹೋಗಿ ಐವತ್ತು ಸಾವಿರ ರೂಪಾಯಿಗಳಿಗೆ ನಗಗಳನ್ನು ಕೊಂಡುಕೊಂಡರು. ಆಗ ಕೈಯಲ್ಲಿದ್ದ ನಲುವತ್ತು ಸಾವಿರ ರೂಪಾಯಿಗಳನ್ನು ಕೊಟ್ಟು, ಉಳಿದ ಹತ್ತು ಸಾವಿರವನ್ನು ಬೇಗನೇ ಸೇರಿಸಿ ತಂದುಕೊಡುವೆನೆಂದು ಹೇಳಿದರು.

ಕೃಷ್ಣಸ್ವಾಮಿಗೆ ದಾಸಯ್ಯನವರ ಪರಿಚಯ ಚೆನ್ನಾಗಿದ್ದಿತು. ಆದುದರಿಂದ "ಅನುಕೂಲವಾದಾಗ ತಂದುಕೊಡಿ" ಎಂದು ಹೇಳಿ ನಗಗಳನ್ನು ಕೊಟ್ಟರು. ಈ ಹತ್ತು ಸಾವಿರದ ಲೆಕ್ಕವನ್ನು ಕೃಷ್ಣಸ್ವಾಮಿಯವರು ಬರೆದಿಟ್ಟುಕೊಂಡರಾದರೂ, ಅದು ತಾತ್ಕಾಲಿಕವಾದ ಸಣ್ಣ ಚೀಟುಮಾತ್ರ. ಆ ಮೇಲೆ ಅನೇಕ ವರ್ತಕ ವಹಿವಾಟುಗಳ ತುಮುಲದಲ್ಲಿ ಆ ಚೀಟು ಹಾರಿಹೋದುದು ಮಾತ್ರವಲ್ಲ, ಆ ಹತ್ತು ಸಾವಿರದ ಬಾಕಿಯನ್ನು ಅವರು ಪೂರ್ತಿ ಮರೆತೂ ಹೋದರು.

ದಾಸಯ್ಯ ಮಾತ್ರ ತಾನು ಕೃಷ್ಣಸ್ವಾಮಿಗೆ ಹತ್ತು ಸಾವಿರ ಬಾಕಿಯಾಗಿರುವ ಸಂಗತಿಯನ್ನು ಮರೆತು ಬಿಡಲಿಲ್ಲ. ಆದರೆ ಅಂದುಕೊಂಡ ಅಂದಾಜಿಗಿಂತ ಇಮ್ಮಡಿ ಮುಮ್ಮಡಿ ಖರ್ಚುಬಂದು, ಬೇರೆ ಅನೇಕ ಆರ್ಥಿಕ ಮುಗ್ಗಟ್ಟುಗಳುಂಟಾಗಿ, ಹತ್ತು ಸಾವಿರವನ್ನು ಕೊಡಲು ಸಾಧ್ಯವಾಗದೆ ಹೋಯಿತು. ಚಿಂತೆಯಿಂದಾಗಿ ಅವರ ಆರೋಗ್ಯ ಕೆಟ್ಟಿತು. ರೋಗಗ್ರಸ್ತರಾಗಿ ಸಾಯುವ ಮೊದಲು ತಮ್ಮ ಮಗ ಮುರಳಿಯನ್ನು ಕರೆದು, "ಮಗನೇ, ನಿನ್ನ ಅಕ್ಕನ ಮದುವೆಗೆ ನಗಗಳನ್ನು ಕೊಂಡುಕೊಂಡಾಗ, ನಗರದ ವರ್ತಕ ಕೃಷ್ಣಸ್ವಾಮಿಗೆ ನಾನು ಹತ್ತು ಸಾವಿರ ರೂಪಾಯಿ ಬಾಕಿಮಾಡಿದ್ದೇನೆ. ಅದನ್ನು ತೀರಿಸಲಿಕ್ಕೆ ನನಗೆ ಸಾಧ್ಯವಾಗದೇ ಹೋಯಿತು. ಎಂದಾದರೂ ನೀನು ಆ ಸಾಲವನ್ನು ಕೊಟ್ಟು ತೀರಿಸಿದ ಹೊರತು ನನ್ನ ಆತ್ಮಕ್ಕೆ ಶಾಂತಿಯಾಗದು. ಖಂಡಿತಾ ತೀರಿಸುತ್ತೇನೆಂದು ಮಾತು ಕೊಡಪ್ಪ" ಎಂದನು.

ಮುರಳಿ ತಂದೆ ಮಾಡಿದ ಸಾಲವನ್ನು ತೀರಿಸುತ್ತೇನೆಂದು ಪ್ರಮಾಣ ಮಾಡಿ ಹೇಳಿದನು. ಆ ಮೇಲೆ ದಾಸಯ್ಯ ಪ್ರಾಣಬಿಟ್ಟರು.

ಕೆ. ಶರಶ್ಚಂದ್ರ

ತಂದೆಯ ಮರಣದ ಮೇಲೆ ಮುರಳಿ ತನ್ನ ಜೀವನಕ್ಕೆ ಹೊಸದಾಗಿ ದಾರಿಮಾಡಿಕೊಳ್ಳಬೇಕಾಗಿ ಬಂತು. ತಂದೆ ಗೌರವದ ಮಬ್ಬಿಗೆ ಬಿದ್ದು ಇದ್ದುದನ್ನೆಲ್ಲಾ ಕಳೆದುಕೊಂಡಿದ್ದರು. ಆದುದರಿಂದ ಮುರಳಿ ರಾತ್ರೀ ಹಗಲು ಕಷ್ಟಪಟ್ಟು ಸಂಪಾದಿಸಿ ದಿನ ಕಳೆಯುತ್ತ, ತನ್ನ ಹೊಟ್ಟೆಯನ್ನು ಕೂಡಾ ಸಾಧ್ಯವಾದಷ್ಟು ಕಟ್ಟಿಕೊಂಡು. ತಂದೆಯ ಸಾಲವನ್ನು ತೀರಿಸಬೇಕೆಂದು ಸ್ವಲ್ಪ ಸ್ವಲ್ಪವೇ ಹಣ ಉಳಿಸಿಕೊಂಡು ಬರುತ್ತಿದ್ದನು. ಕಡೆಗೆ ಹೇಗೋ ಅವನ ವ್ರತ ಫಲಿಸಿತು. ಹತ್ತು ಸಾವಿರ ರೂಪಾಯಿ ತುಂಬಿಬಿಟ್ಟಿತು. ಮುರಳಿ ಅದನ್ನು ತೆಗೆದುಕೊಂಡು, ನಗರಕ್ಕೆ ಹೋಗಿ ಕೃಷ್ಣಸ್ವಾಮಿಯ ನಗಗಳ ಅಂಗಡಿಯನ್ನು ಹುಡುಕಿದನು. ಅಂಗಡಿ ಮಾರಿಹೋದ ಸಂಗತಿ ಗೊತ್ತಾಗಿ, ಮನೆ ಹುಡುಕುತ್ತಾ ಹೋದನು. ಮನೆಯೂ ಸಿಕ್ಕಿತು.

ಆ ಮನೆಯಲ್ಲಿದ್ದ ಒಬ್ಬ ಯುವಕನು ಮುರಳಿಯನ್ನು ನೋಡಿ, "ಯಾರು ನೀವು? ಏನು ಬೇಕು?" ಎಂದು ಕೇಳಿದನು.

"ಕೃಷ್ಣಸ್ವಾಮಿಯವರನ್ನು ನೋಡಬೇಕಾಗಿತ್ತು. ಇದ್ದಾರೆಯೆ?" ಎಂದು ಕೇಳಿದನು ಮುರಳಿ.

"ಕೃಷ್ಣಸ್ವಾಮಿಯವರು ತೀರಿಹೋಗಿ ಐದು ವರ್ಷಗಳಾದುವು; ಹೋಗುವಾಗ ಅವರು ತಮ್ಮ ಮಗನಿಗೆ ಬಲು ದೊಡ್ಡ ಸಾಲದ ಹೊರೆಯನ್ನು ಹೇರಿಸಿ ಹೋಗಿಬಿಟ್ಟರು." ಎಂದನು ಯುವಕ.

"ಹಾಗೇನು? ಈಗ ಕೃಷ್ಣಸ್ವಾಮಿಯವರ ಮಗ ಎಲ್ಲಿದ್ದಾರೆ?" ಎಂದು ಮುರಳಿ ಪ್ರಶ್ನೆಮಾಡಿದನು.

"ಅಪ್ಪ ಮಾಡಿದ ಸಾಲವನ್ನು ತೀರಿಸಲು ಸಾಧ್ಯವಾಗದೆ. ಆ ಹುಡುಗ ಹೆದರಿ ಪರಾರಿಯಾಗಿಬಿಟ್ಟ. ಎಲ್ಲಿದ್ದಾನೋ ಗೊತ್ತಿಲ್ಲ. ನಾವು ಬಾಡಿಗೆಗಿರುವವರು" ಎಂದ ಆ ಯುವಕ.

"ಕೃಷ್ಣಸ್ವಾಮಿಯವರು ಬಹುದೊಡ್ಡ ನಗಗಳ ವರ್ತಕರಾಗಿದ್ದರಂತಲ್ಲಾ? ಅಂಥವರಿಗೆ ಇಷ್ಟೊಂದು ಸಾಲ ಹೇಗಾಯಿತೋ?" ಎಂದು ಮುರಳಿ ಕೇಳಿದನು

ಅದಕ್ಕೆ ಆ ಯುವಕನು, "ಹೇಗಾಯಿತೆಂದರೆ ಏನು ಹೇಳಲಿ? ಬೇಕಾದಷ್ಟು ಬರುವ ಲಾಭದಲ್ಲಿ



ತೃಪ್ತಿ ಕಾಣದೆ ಸಮುದ್ರ ವ್ಯಾಪಾರಕ್ಕೆ ಶುರು ಮಾಡಿದರು. ಅವರ ಸರಕುಗಳೆಲ್ಲ ಸಮುದ್ರದಲ್ಲಿ ಮುಳುಗಿದುವು. ಅವರೂ ಮುಳುಗಿದರು. ಸಾಲದ ಹೊರೆ ಮಾತ್ರ ಬದುಕಿರುವ ಮಗನಿಗೆ ಉಳಿಯಿತು." ಎಂದು ಕಟುವಾಗಿಯೇ ಹೇಳಿದನು.

"ಅಯ್ಯೋ! ಪಾಪವೆ! ಎಂತಹ ಅನ್ಯಾಯವಾಗಿ ಹೋಯಿತು! ಕೃಷ್ಣಸ್ವಾಮಿಯವರು ನಗಗಳ ವ್ಯಾಪಾರಮಾಡಿಕೊಂಡಿದ್ದ ಕಾಲದಲ್ಲಿ ನನ್ನ ತಂದೆ ಅವರಿಗೆ ಹತ್ತು ಸಾವಿರ ರೂಪಾಯಿ ಬಾಕಿ ಮಾಡಿದ್ದರು. ಆ ಮೇಲೆ ಕೃಷ್ಣಸ್ವಾಮಿಯವರ ಹಾಗೆಯೇ ನನ್ನ ತಂದೆಗೂ ಕಾಲಸ್ಥಿತಿ ಕೂಡಿಬಾರದೆ ಇದ್ದುದೆಲ್ಲಾ ಹೋಯಿತು. ಆಖೈರು ಕ್ಷಣದಲ್ಲಿ ಅವರು ಈ ಹತ್ತು ಸಾವಿರ ಸಾಲದ ಸಂಗತಿಯನ್ನು ನನಗೆ ಹೇಳಿ, ಅದನ್ನು ತೀರಿಸುವ ಭಾರ ನನ್ನ ಮೇಲೆ ಹಾಕಿ ಕಣ್ಣು ಮುಚ್ಚಿದರು. ನಾನು ಹೇಗೆ ಹೋಗೋ ಮಾಡಿ ಹತ್ತು ಸಾವಿರ ರೂಪಾಯಿ ಸೇರಿಸಿ, ನನ್ನ ತಂದೆಯ ಋಣವನ್ನು ತೀರಿಸಲು ಇಷ್ಟು ಕಾಲವಾಯಿತು. ಕೃಷ್ಣಸ್ವಾಮಿಯವರು ಇಲ್ಲದಿದ್ದರೂ ಹೋಗಲಿ, ಈಗ ಅವರ ಮಗನೂ ಇಲ್ಲವೆನ್ನುವಿರಲ್ಲ? ಎಲ್ಲಿ ಹುಡುಕಲಿ? ಈ ಹಣವನ್ನು ಯಾರಿಗೆ ಕೊಡಲಿ? ಅವರ ಹೆಂಡತಿ ಯಾದರೂ ಇದ್ದಾರೆಯೆ? ಇಲ್ಲದಿದ್ದರೆ ಅವರ ಹೆಸರಿನಲ್ಲಿ ಒಂದು ಛತ್ರ ಕಟ್ಟಿಸಿ ನನ್ನ ತಂದೆಯ ಆತ್ಮಕ್ಕೆ ಶಾಂತಿ ಮಾಡಿಸುತ್ತೇನೆ" ಎಂದನು ಮುರಳಿ. ಆಗ ಆ ಯುವಕನು ಕಣ್ಣೀರು ತುಂಬಿ, ಗದ್ಗದ ಸ್ವರದಿಂದ, "ಅಯ್ಯಾ, ಕೃಷ್ಣಸ್ವಾಮಿಯ ಮಗ ಎಲ್ಲಿಗೋ ಹೋಗಲಿಲ್ಲ. ನಾನೇ ಅವರ ಮಗ. ತಾಯಿ ದುಡಿಯಲು ಹೋಗಿದ್ದಾಳೆ. ನೀವು ನನ್ನ ತಂದೆಯ ಸಾಲ ಕೇಳಲು ಬಂದವರೆಂದುಕೊಂಡು ಹೆದರಿ ನಿಮ್ಮೊಂದಿಗೆ ಸುಳ್ಳು ಹೇಳಿದೆ" ಎಂದನು.

ಮುರಳಿ ಆ ಮಾತು ಕೇಳಿ ನೊಂದುಕೊಂಡು, "ಅಯ್ಯಾ, ತಂದೆ ಮಾಡಿದ ಸಾಲಕ್ಕೆ ಹೀಗೆ ಭಯ ಪಡುವುದುಂಟೆ? ಕಷ್ಟಪಟ್ಟಾದರೂ ತಂದೆಯ ಸಾಲವನ್ನು ತೀರಿಸಿ, ಅವರ ಮರ್ಯಾದೆ ಉಳಿಸಬೇಕಾದುದು ಮಗನ ಧರ್ಮವಲ್ಲವೆ? ನನ್ನ ತಂದೆಯ ಈ ಸಾಲದ ಹಣ ಸೇರಿಸಲು ನಾನೆಷ್ಟೋ ಕಷ್ಟಪಡಬೇಕಾಯಿತು. ಇರಲಿ, ನೀವು ಈ ಹಣವನ್ನು ಮೂಲಧನವಾಗಿಟ್ಟು ಹಣ ಸಂಪಾದಿಸಿ ನಿಮ್ಮ ತಂದೆಯ ಸಾಲವನ್ನು ತೀರಿಸಲು ಪ್ರಯತ್ನಮಾಡಿ. ಅಷ್ಟೇ ಹೊರತು ತಂದೆಯ ಸಾಲವನ್ನು ಭಾರವೆಂದು ಮಗನಾದವನು ಭಾವಿಸಲೇ ಬಾರದು" ಎಂದು ಹೇಳಿ ಅವನಿಗೆ ಹತ್ತು ಸಾವಿರವನ್ನು ಕೊಟ್ಟನು.

ಕೃಷ್ಣಸ್ವಾಮಿಯ ಮಗನು ಆ ಹಣದಿಂದ ವ್ಯಾಪಾರಮಾಡಿ, ಲಾಭಗಳಿಸಿ ತನ್ನ ತಂದೆ ಮಾಡಿದ ಸಾಲವನ್ನೆಲ್ಲಾ ತೀರಿಸಿದನು.





# ದೇವೀಭಾಗವತ

ಆದಿಶಕ್ತಿಯೂ ಪರದೇವತೆಯೂ ಆದ ಮಹಾದೇವಿಯನ್ನು ಆರಾಧಿಸಿ ವರಗಳನ್ನು ಪಡೆದವರು ಎಷ್ಟೋ ಮಂದಿ ಇದ್ದಾರೆ.

ಅಂತಹವರಲ್ಲಿ ಸುರಥ ಮಹಾರಾಜನು ವಿಶಾಲವಾದ ರಾಜ್ಯಕ್ಕೆ ಅಧಿಪತಿಯಾಗಿ ಒಳ್ಳೆಯ ರೀತಿಯಲ್ಲಿ ಪಾಲಿಸಿಕೊಂಡಿದ್ದನು. ಅವನು ಮಾಡದ ಪುಣ್ಯ ಕಾರ್ಯಗಳಿರಲಿಲ್ಲ. ಪಾಲಿಸದ ನೀತಿ ನಿಯಮಗಳಿರಲಿಲ್ಲ. ಹೀಗೆ ಎಲ್ಲಾ ವಿಧದಲ್ಲಿಯೂ ಸುಖವಾಗಿದ್ದ ಸುರಥ ಮಹಾರಾಜನಿಗೆ ಕೂಡ ಗಂಡಾಂತರ ಬಂದಿತು. ಅರಣ್ಯ ಜಾತಿಯವರೂ, ಪರದೇಶದ ಯವನರೂ ಒಂದೇಸಾರಿ ದೊಡ್ಡ ಸೇನೆಗಳೊಂದಿಗೆ ಸುರಥನ ಮೇಲೆ ಯುದ್ಧಕ್ಕೆ ಬಂದರು.

ಯುದ್ಧದಲ್ಲಿ ಶತ್ರುಗಳು ಮೊರಟರಾಗಿ ಅತ್ಯಧಿಕ ಬಲಗಳೊಂದಿಗೆ ಯುದ್ಧ ಮಾಡಿದುದರಿಂದ, ಸುರಥನಿಗೆ ಅಪಜಯವಾಯಿತು. ಅದರೆಡೆಯಲ್ಲಿ ಅವನ ಮಂತ್ರಿಗಳೂ ಶತ್ರು ಪಕ್ಷಕ್ಕೆ ಒಡಕೊಂಡರು. ಅದರಿಂದ ಸುರಥನ ಪ್ರಾಣಕ್ಕೇ ಗಂಡಾಂತರ ಬಂದಿತು. ಇದನ್ನೆಲ್ಲ ತಿಳಿದು ಸುರಥನು ತನಗೆ ದೈವವು ಅನುಕೂಲಿಸಲಿಲ್ಲವೆಂದು ಚಿಂತಿಸುತ್ತಾ ಹೀಗೆಂದುಕೊಂಡನು :

"ವಿಶ್ವಾಸದ ಮಂತ್ರಿಗಳೇ ಘಾತಮಾಡುವರೆಂದ ಮೇಲೆ, ಅವರನ್ನು ನಂಬುವುದು ಇನ್ನಿಷ್ಟು ಅಪಾಯ. ಅವರು ನನ್ನನ್ನು ಹಿಡಿದುಕೊಂಡು ಹೋಗಿ ಶತ್ರುಗಳ ಕೈಗೇ ಒಪ್ಪಿಸಿಬಿಡುತ್ತಾರೆ. ಒಮ್ಮೆ ಅಡ್ಡದಾರಿಗೆ ಬಿದ್ದು ದುಷ್ಟತನಕ್ಕೆ ಇಳಿದವರು ಎಂತಹ ಕ್ರೂರ ಕರ್ಮವನ್ನಾದರೂ ಮಾಡಿಬಿಡುತ್ತಾರೆ. ಅಂಥವರಿಗೆ ನೀತಿ ನಿಯಮಗಳ ಗೊಡವೆ ಎಲ್ಲಿಯದು? ಅಂಥವರು ತಂದೆ, ತಾಯಿ, ತಾತ, ಬಂಧು, ಸ್ನೇಹ ಮುಂತಾದ ಆತ್ಮೀಯ ಸಂಬಂಧವನ್ನೆಲ್ಲಾ ಕಡಿದೊಗೆದು ಬಿಡುತ್ತಾರೆ!"

ಹೀಗೆಂದುಕೊಂಡು ಸುರಥನು ವೇಗವಂತವಾದ ತನ್ನ ಕುದರೆಯನ್ನು ಓಡಿಸಿಕೊಂಡು ಗಾಢಾರಣ್ಯದೊಳಗೆ ಹೋಗಿಬಿಟ್ಟನು. ಅದು ಕಾಗೆಗಳು ಪ್ರವೇಶಿಸಲಾಗದಂತಹ ಕಟ್ಟಡವಿ. ದಟ್ಟವಾಗಿ ಕಾಡು ಬಳ್ಳಿಗಳು ಹೆಣೆದುಕೊಂಡು ಭಾರೀ ಮರಗಳು

## ೧೬. ಸುರಥನ ಕಥೆ



ತುಂಬಿದ್ದುವು. ಅವುಗಳ ನಡುವೆ ನದಿಗಳೂ, ನೀರೋಳಿಗಳೂ ಪ್ರವಹಿಸುತ್ತಿದ್ದುವು. ಹುಲಿಗಳು, ಸಿಂಹಗಳು, ಆನೆಗಳು, ಜಿಂಕೆಗಳು ಮೊದಲಾದ ಮೃಗಗಳು ಸ್ವೇಚ್ಛೆಯಾಗಿ ತಿರುಗುತ್ತಿದ್ದುವು. ಸುರಥನು ಮುಂದೆ ಹೋಗುತ್ತಿದ್ದಂತೆ, ಅಂತಹ ಕೀಕಾರಣ್ಯದ ಮಧ್ಯದಲ್ಲಿಯೂ ಬ್ರಹ್ಮಚಾರಿಗಳು ಪಠಿಸುವ ವೇದ ಪಾಠಗಳು ಕೇಳಿಬರ ತೊಡಗಿದುವು. ಹೋಮ ಮಾಡಿದ ಸುವಾಸನೆಯ ಧೂಮಗಾಳಿ ಸುಳಿಯುತ್ತಿದ್ದಿತು. ಚೆನ್ನಾಗಿ ಹಣ್ಣಾದ ಹಣ್ಣುಗಳ ಪರಿಮಳವೂ ಬರತೊಡಗಿತು. ಅವನ ಮನಸ್ಸಿನೊಳಗೆ ಏನೋ ಆಶಾಂಕುರವು ತಲೆಯೆತ್ತ ತೊಡಗಿತು.

ಸುರಥನಿಗೆ ಒಂದು ಆಶ್ರಮವು ಕಂಡಿತು. ಅವನು ಅಲ್ಲಿಗೆ ಹೋಗಿ, ಶಿಷ್ಯರಿಗೆ ಪಾಠ ಹೇಳುತ್ತಿದ್ದ ಒಬ್ಬ ಮುನಿಯನ್ನು ನೋಡಿದನು. ಅವನ ಶರೀರವು ತಪಸ್ಸಿನಿಂದ ಕೃಶವಾಗಿದ್ದರೂ ಮುಖದಲ್ಲಿ ತೇಜಸ್ಸಿದ್ದಿತು. ಜಿಂಕೆಯ ಚರ್ಮದ ಮೇಲೆ ಕುಳಿತಿದ್ದನು. ಪ್ರಶಾಂತವಾದ ಆ ಮುನಿಯ ಮುಖವನ್ನು ನೋಡಿ ಸುರಥನಿಗೆ ಆಯಾಸ ಪರಿಹಾರವಾದಂತಾಯಿತು. ಅವನು ತನ್ನ ಕುದುರೆಯನ್ನು ಒಂದು ಮರಕ್ಕೆ ಕಟ್ಟಿ, ಮುನಿಯ ಬಳಿಗೆ ಹೋಗಿ ಸಾಷ್ಟಾಂಗ ನಮಸ್ಕಾರ ಮಾಡಿ, ಧಾರಾಕಾರವಾಗಿ ಕಣ್ಣೀರು ಸುರಿಸುತ್ತ ಕೈ ಮುಗಿದು ಕುಳಿತನು.

ಮುನಿ ಅವನ ಬೆನ್ನು ತಟ್ಟಿ ಆದರಿಸಿ, ಒಬ್ಬ ಶಿಷ್ಯನ ಮೂಲಕ ಜಿಂಕೆಯ ಚರ್ಮವನ್ನು ತರಿಸಿ, ಅದರ ಮೇಲೆ ಅವನನ್ನು ಕುಳಿತುಕೊಳ್ಳಲು ಹೇಳಿ, ಫಲ ಪಾನಿಯಗಳನ್ನು ತರಿಸಿಕೊಟ್ಟು, ಅತಿಥಿ ಮರ್ಯಾದೆಗಳನ್ನೆಲ್ಲ ಮಾಡಿ, "ಅಪ್ಪಾ, ನೀನು ಎಲ್ಲಿಂದ ಬರುತ್ತಿರುವಿ? ನಿನಗೆ ಬಂದ ಕಷ್ಟವೇನು ? ಎಲ್ಲವನ್ನೂ ವಿವರವಾಗಿ ಹೇಳು. ನಿನ್ನನ್ನು ನೋಡಿದರೆ ಒಳ್ಳೆಯ ಕಾರ್ಯಗಳಲ್ಲೇ ನಿರತನಾದವನಂತೆ ಕಾಣುವಿ. ನಿನ್ನ ಮನಸ್ಸಿನೊಳಗಿರುವ ಒಳ್ಳೆಯ ಬಯಕೆ ಎಷ್ಟು ಕಷ್ಟ ಸಾಧ್ಯವಾದುದಾದರೂ ನಾನು ಅದನ್ನು ತೀರಿಸುತ್ತೇನೆ. ಹೇಳಪ್ಪ." ಎಂದನು.

ಅದಕ್ಕೆ ಸುರಥನು ಗದ್ಗದ ಸ್ವರದಿಂದ, "ನಾನು "ಸುರಥನೆಂಬ ಹೆಸರಿನ ಒಬ್ಬ ರಾಜ. ಶತ್ರುಗಳಿಂದಲೂ ಹಿತ. ಶತ್ರುಗಳಿಂದಲೂ ಸೋತು ತಪ್ಪಿಸಿಕೊಂಡು ಬಂದು ನಿಮ್ಮ ಚರಣ ಸನ್ನಿಧಿಯಲ್ಲಿದ್ದೇನೆ. ನಾನು ರಾಜ್ಯವನ್ನೂ, ಹೆಂಡತಿ ಮಕ್ಕಳನ್ನೂ ಬಿಟ್ಟು ಈ ಅರಣ್ಯಕ್ಕೆ ಓಡಿ ಬಂದಿದ್ದೇನೆ. ಅವರ ದೃಷ್ಟಿಯಲ್ಲಿ ನಾನು ಸತ್ತುಹೋದವನೇ. ಆದರೂ ಬದುಕಿರುವ ನನಗೆ ಇಲ್ಲಿ ಈಗ ತಾಯಿಯೂ ತಂದೆಯೂ ಎಲ್ಲವೂ ನೀವೇ! ನಿಮ್ಮ ಸೇವೆಯಲ್ಲಿ ನೀವು ಹೇಳಿದ ಕೆಲಸಗಳೆಲ್ಲವನ್ನೂ ಮಾಡುತ್ತ ಇಲ್ಲಿರುತ್ತೇನೆ. ನಾನು ಯಾವ ದುರಾಶೆಗೂ ಹೋಗದೆ ನನ್ನ ಪಾಡಿಗಿದ್ದರೂ, ಶತ್ರುಗಳು ದುರಾಶೆಯಿಂದ ನನಗೆ ಇಂಥ ಗತಿಯನ್ನು ತಂದಿಟ್ಟರು. ಈಗ ನಿಸ್ಸಹಾಯಕನಾಗಿರುವ ನನಗೆ ನಿಮ್ಮ ದಯದಿಂದ ಶತ್ರು ಭಯವು ಹೋಗಿ, ನನ್ನ

ಕಡೆಯವರ ಬಳಿಗೆ ನಾನು ಸೇರುವಂತಾದರೆ ಅದಕ್ಕಿಂತ ಹೆಚ್ಚಿನ ಸಂತೋಷ ಬೇರೇನಿಲ್ಲ. ಇದೇ ನನ್ನ ಬಯಕೆ" ಎಂದನು.

ಮುನಿ ಅವನಿಗೆ ಅಭಯ ಕೊಡುತ್ತ, "ನೀನು ಇಲ್ಲಿ ವನವೃತ್ತಿ ಅವಲಂಬಿಸಿ, ಅರಣ್ಯ ಧಾನ್ಯಗಳ ಅನ್ನ ಉಣ್ಣುತ್ತ, ಶುಚಿಯಾಗಿದ್ದು, ಹಿಂಸೆಮಾಡದೆ ನಮ್ಮ ಆಶ್ರಮವನದಲ್ಲಿ ಸ್ವೇಚ್ಛೆಯಾಗಿ ಸಂಚರಿಸಿ ಕೊಂಡಿರು. ಯಾವ ವನ ಮೃಗಗಳಿಂದಲೂ ನಿನಗೇನೂ ಆಗದು. ಕ್ರಮವಾಗಿ ನಿನ್ನ ಎಲ್ಲಾ ಶುಭೇಚ್ಛೆಗಳೂ ನೆರವೇರುತ್ತವೆ." ಎಂದನು.

ಈ ಮಾತುಗಳನ್ನು ಕೇಳಿ ಸುರಥನಿಗೆ ಸಂತೋಷ ವಾಯಿತು. ಮುನಿಯ ಮಾತಿನ ಮೇಲೆ ವಿಶ್ವಾಸವಿಟ್ಟು ಮುನಿ ವೃತ್ತಿ ಹಿಡಿದು ಆಶ್ರಮದಲ್ಲೇ ಇದ್ದನು.

ಒಂದು ದಿನ ಅವನು ತಣ್ಣಗಿನ ಮರದ ನೆರಳಿನಲ್ಲಿ ಸೇರಿ ತನ್ನನ್ನು ಕುರಿತು ಆಲೋಚಿಸಿಕೊಂಡಿದ್ದನು. ತನ್ನ ಯಾವ ಪ್ರಯತ್ನವೂ ಇಲ್ಲದೆ, ಯಾವ ತಪ್ಪೂ ಇಲ್ಲದೆ ತನಗೆ ಪ್ರಾಪ್ತವಾದ ಕಷ್ಟಗಳನ್ನು, ಅಂದರೆ ರಾಜ್ಯವು ಹೋಗುವುದೂ, ಹೆಂಡತಿ ಮಕ್ಕಳ ವಿಯೋಗವೂ, ಶತ್ರುಗಳ ಮುಂದೆ ಪರಾಭವ ವಾದುದೂ, ವಿಶ್ವಾಸಿಗಳು ಮಾಡಿದ ಘಾತಗಳೂ ಇವನ್ನೆಲ್ಲ ಕುರಿತು ಆಲೋಚಿಸುವಾಗ, ಒಬ್ಬ ಹೊಸ ಮನುಷ್ಯನು ಅಲ್ಲಿಗೆ ಬಂದನು. ಅವನು ಅತ್ಯಂತ ದೀನಸ್ಥಿತಿಯಲ್ಲಿರುವಂತೆ ಕಾಣುತ್ತಿದ್ದನು.

ಸುರಥನು ಅವನನ್ನು ಕುಳಿತುಕೊಳ್ಳುವಂತೆ ಹೇಳಿ, "ಯಾರು ನೀನು? ಯಾವ ಕೆಲಸದ ಮೇಲೆ ಈ ಕಡೆಗೆ ಬಂದೆ? ನರಸಂಚಾರವಿಲ್ಲದೆ, ಹೊರ ನೋಟಕ್ಕೆ ಭಯಂಕರವಾಗಿ ಕಾಣುವ ಈ ವನಪ್ರದೇಶಕ್ಕೆ ನೀನು ಬರಬೇಕಾದರೆ ಏನೋ ಕಷ್ಟ ಬಂದಿರಬೇಕು. ಏನು ಕಷ್ಟವೋ ಹೇಳುವಂಥಾದ್ದಾದರೆ ಹೇಳು. ಕೆಲವು ಕಷ್ಟ ಗಳನ್ನು ಇನ್ನೊಬ್ಬರೊಡನೆ ಹೇಳಿಕೊಂಡರೆ ಸಮಾಧಾನ ವೆನಿಸುತ್ತದೆ" ಎಂದನು.



ಅದಕ್ಕೆ ಆ ಮನುಷ್ಯ, "ನಾನು ವೈಶ್ಯ ವೃತ್ತಿ ಯವನು. ದೊಡ್ಡ ಐಶ್ವರ್ಯವಂತನು. ಸತ್ಯವ್ರತ ಹಿಡಿದವನು. ದಾನಧರ್ಮಗಳನ್ನು ಧಾರಾಳವಾಗಿ ಮಾಡುತ್ತ ಬಹಳ ಉದಾರನೆಂದು ಹೆಸರು ಪಡೆ ದವನು. ಹುಟ್ಟಿದಂದಿನಿಂದ ಕಷ್ಟವೆಂಬುದನ್ನು ಅರಿಯ ದವನು. ಅಂತಹ ನನ್ನನ್ನು ಹೆಂಡತಿಯೂ, ಮಕ್ಕಳೂ ಧನಲೋಭದಿಂದ ತಿರುಗಿಬಿದ್ದು ಓಡಿಸಿಬಿಟ್ಟರು, ನಮ್ಮವರೇ ನನ್ನನ್ನು ಓಡಿಸಿಬಿಟ್ಟ ಮೇಲೆ, ಊರೊಳಗೆ ಎಲ್ಲಿ ಹೋಗಿ ಏನು ಪ್ರಯೋಜನ? ಈ ಅರಣ್ಯಕ್ಕೆ ಬಂದುಬಿದ್ದೆನು. ನನ್ನ ಹೆಸರು ಸಮಾಧಿ. ತಾವು ಯಾರೋ? ನಾನು ತಿಳಿಯಬಹುದೆ? ತಮ್ಮ ಮುಖ ನೋಡಿದರೆ ಒಳ್ಳೆಯ ರಾಜ ಕಳೆ ಸ್ಫುರಿಸು ತ್ತದೆ" ಎಂದನು.

"ನನ್ನ ಹೆಸರು ಸುರಥ. ನಾನು ರಾಜನಾಗಿದ್ದವನು. ಶತ್ರುಗಳ ಮುಂದೆ ಸೋತು, ದುರ್ಮರಣ ಹೊಂದಲು ಇಷ್ಟವಿಲ್ಲದೆ, ನಿನ್ನ ಹಾಗೆಯೇ ಈ ಅರಣ್ಯಕ್ಕೆ ಬಂದು



ಪಾಶ ಬಿಡುವುದಿಲ್ಲ ಅನ್ನುತ್ತೆ. ನಾನು ಇನ್ನು ಜೀವ ದಿಂದ ಅವರನ್ನು ನೋಡುವೆನೋ ಇಲ್ಲವೋ!" ಎಂದು ಕೂಡ ಕೂಡ ಕಣ್ಣೀರು ಸುರಿಸಿದನು ಸಮಾಧಿ.

ಹೀಗೆ ಶೋಕಿಸುವ ಸಮಾಧಿಯನ್ನು ನೋಡಿ ಸುರಥನು, "ನಿನ್ನನ್ನು ಮನೆಯಿಂದ ಓಡಿಸಿದ ಆ ರಾಕ್ಷಸರನ್ನು ನೀನು ಮತ್ತೆ ನೋಡಿದರೆ ಮಾತ್ರ ನಿನಗೆ ಏನು ಸುಖ ಉಂಟಾದೀತು? ನಾನು ಕೂಡಾ ವಿಶಾಲವಾದ ನನ್ನ ರಾಜ್ಯವೆಲ್ಲಾ ಹೋದುದಕ್ಕೆ ದುಃಖಿಸುತ್ತಲೇ ಇದ್ದೇನೆ. ದೈವಿಕವಾಗಿ ಬರುವ ಕಷ್ಟ ಗಳನ್ನು ದಾಟಬೇಕಾದರೆ ಅವುಗಳನ್ನು ಅನುಭವಿಸಲೇ ಬೇಕಾಗುತ್ತೆ. ಆದರೂ ಇಲ್ಲಿ ಇರುವ ಮುನಿಯ ಹತ್ತಿರ ಮಾತಾಡಿದರೆ, ನಮ್ಮ ದುಃಖವು ತೊಲಗು ವಂತಹ ಉಪಾಯವಿದ್ದರೆ ಹೇಳುವರು. ಆವರ ದರ್ಶನಮಾಡಿದರೂ ಸಹ ಒಂದು ಬಗೆಯ ಧನ್ಯತೆ ಯುಂಟಾಗುತ್ತದೆ. ಹೋಗೋಣ ಬಾ" ಎಂದನು.

ಬಿದ್ದವನು. ಭಾಗ್ಯವೆಲ್ಲಾ ಹೋಗಿ, ಅಭಿಮಾನವನ್ನು ಕಳೆದುಕೊಂಡು, ಜಡನ ಹಾಗೆ ಇಲ್ಲಿ ಸಂಚರಿಸಿ ಕೊಂಡಿದ್ದೇನೆ. ಇಲ್ಲಿರುವ ಯಾವ ಮೃಗಗಳೂ ಹಾನಿ ಮಾಡುವಂಥವಲ್ಲ. ಅಂಥ ಪ್ರಭಾವಶಾಲಿಗಳಾದ ಮುನಿಯೊಬ್ಬರು ಇಲ್ಲಿಯೇ ಇದ್ದಾರೆ. ದೈವಿಕವಾಗಿ ನಾವಿಬ್ಬರೂ ಇಲ್ಲಿ ಸೇರಿಕೊಂಡೆವು. ಆದುದರಿಂದ ಎಲ್ಲಾ ಚಿಂತೆಗಳನ್ನೂ ಬಿಟ್ಟು ಇಲ್ಲಿಯೇ ಸುಖ ವಾಗಿರೋಣ. ಏನನ್ನುವಿ?" ಎಂದನು ಸುರಥ.

ಅದಕ್ಕೆ ವೈಶ್ಯನು, "ರಾಜಾ, ನನ್ನ ಮನಸ್ಸಿಗೆ ಶಾಂತಿ ಸಮಾಧಾನಗಳೆಲ್ಲಿಯದು? ಹೆಂಡತಿಯ ಸುಖ ವಿಲ್ಲದೆ ಹೋಯಿತು. ನನ್ನ ಕುಟುಂಬದ ಆಧಾರ ಹಾಳಾಯಿತು. ಪುತ್ರರು ಅಪ್ರಯೋಜಕರಾದರು. ನಾನು ಹೊಟ್ಟೆ ಬಾಯಿ ಕಟ್ಟಿ ಸೇರಿಸಿದ ಹಣವನ್ನೆಲ್ಲಾ ನನ್ನ ಪುತ್ರರು ದುಂದು ವ್ಯಯಮಾಡಿ ದರಿದ್ರರಾಗಿ ಬೀದಿಗೆ ಬೀಳುವರೇನೋ ಎಂಬ ಚಿಂತೆಯಿಂದ ನನಗೆ ಶಾಂತಿ ಇಲ್ಲವಾಗಿದೆ. ಎಷ್ಟೇ ಕೆಟ್ಟವರಾದರೂ ಪುತ್ರ

ವೈಶ್ಯ ಸಮಾಧಿ ಅದಕ್ಕೆ ಒಪ್ಪಿದನು. ಇಬ್ಬರೂ ಮುನಿಯ ಬಳಿಗೆ ಹೋಗಿ ನಮಸ್ಕಾರಮಾಡಿ ನಿಂತರು. ಸುರಥನು ಮುನಿಯೊಂದಿಗೆ ಹೀಗೆಂದನು:

"ಇವನ ಹೆಸರು ಸಮಾಧಿ. ವೈಶ್ಯ ವೃತ್ತಿಯವನು. ಈ ಅರಣ್ಯದಲ್ಲಿ ನನಗೆ ಮಿತ್ರನಾದನು. ಈ ಪುಣ್ಯಾತ್ಮ ನನ್ನು ಹೆಂಡತಿ ಮಕ್ಕಳೇ ಹೊರಡಿಸಿಬಿಟ್ಟರು. ಇವನು ಈಗ ನಿಮಗೆ ಶರಣಾರ್ಥಿಯಾಗಿ ಬಂದಿದ್ದಾನೆ. ನನ್ನನ್ನು ಕಾಪಾಡಿದ ವಿಧವಾಗಿಯೇ, ಪಾಪ, ಇವನನ್ನು ಕೂಡಾ ಕಾಪಾಡಬೇಕು. ನಿಮ್ಮ ದಯ ದಿಂದ ನಾನು ಇಲ್ಲಿ ಸುಖವಾಗಿದ್ದೇನೆ. ಆದರೂ ನಾನು ಪಟ್ಟ ಕಷ್ಟಗಳನ್ನು ಮರೆಯಲಾಗದೆ ನಿದ್ದೆ ಸರಿಯಾಗಿ ಬರುವದಿಲ್ಲ. ಸ್ವಾಮಿ, ನಮ್ಮ ದುಃಖವು ನಿವಾರಣೆಯಾಗುವಂತಹ ಒಂದು ಮಾರ್ಗವನ್ನು ನೀವು ತಿಳಿಸಬೇಕು."

ಈ ಪ್ರಾರ್ಥನೆಯನ್ನು ಕೇಳಿ ಮುನಿ, "ಅಪ್ಪ ಗಳಿರಾ, ತ್ರಿಮೂರ್ತಿಗಳಿಗಾದರೂ ಮಾಯೆ ತಪ್ಪಿದ್ದಲ್ಲ.

ಅವರು ಕೂಡಾ ಮೋಹ ಸಮುದ್ರದಲ್ಲಿ ಬಿದ್ದು ತೊಳಲುತ್ತಾರೆನ್ನುವಾಗ, ನಿಮ್ಮಂತಹ ಮಾನವ ಮಾತ್ರರ ಸಂಗತಿ ಕೇಳಬೇಕೆ? ಇದಕ್ಕೊಂದು ಕಥೆಯನ್ನು ಹೇಳುತ್ತೇನೆ." ಎಂದು ಕಥೆಯನ್ನು ಹೇಳಿದನು. ಅದೇನೆಂದರೆ: ಹಿಂದೆ ಕೃತಯುಗವು ನಡೆಯುತ್ತಿದ್ದಾಗ ಶ್ವೇತದ್ವೀಪದಲ್ಲಿ ನಾರಾಯಣನು ತಪಸ್ಸು ಮಾಡಿಕೊಂಡಿದ್ದನು. ಅದೇ ಕಾಲದಲ್ಲಿ ಬ್ರಹ್ಮನೂ ಸಹ ತನ್ನ ಮೋಹ ನಿವೃತ್ತಿಗಾಗಿ ನಾರಾಯಣನ ಸಮೀಪ ಕುಳಿತು ತಪಸ್ಸಿಗೆ ತೊಡಗಿದನು.

ಇಬ್ಬರೂ ಒಬ್ಬರನ್ನೊಬ್ಬರು ನೋಡಲೂ ಇಲ್ಲ. ಸ್ವಲ್ಪ ಕಾಲದ ಮೇಲೆ ಇಬ್ಬರೂ ತಪಸ್ಸನ್ನು ಸಾಕು ಮಾಡಿ ಎದ್ದು ಹೋಗುತ್ತ, ಒಂದು ಕಡೆಯಲ್ಲಿ ಒಬ್ಬರನ್ನೊಬ್ಬರು ಸಂಧಿಸಿ, "ನೀನು ಯಾರು? ನೀನು ಯಾರು?" ಎಂದು ಆಶ್ಚರ್ಯಪಡುತ್ತ ಪರಸ್ಪರ ಪ್ರಶ್ನಿಸಿಕೊಂಡರು.

"ನಾನು ಚರಾಚರ ಪ್ರಪಂಚವನ್ನೆಲ್ಲಾ ಸೃಷ್ಟಿ ಮಾಡಿದವನು" ಎಂದನು ಬ್ರಹ್ಮ. ಅದನ್ನು ಕೇಳಿ ವಿಷ್ಣು, "ಜಗತ್ತನ್ನೆಲ್ಲಾ ನೀನೇ ಸೃಷ್ಟಿಸಿರುವುದಾಗಿ ನನ್ನ ಹತ್ತಿರ ಹೇಳುವಿಯಾ? ನೀನೆಷ್ಟರವನು ನನ್ನ ಮುಂದೆ? ನಾನು ವಿಷ್ಣು ತಿಳಿದುಕೋ. ಈ ಸೃಷ್ಟಿಯನ್ನೆಲ್ಲಾ ನಾನೇ ಸೃಷ್ಟಿಸಿದೆ. ಆ ದಿನ ನಾನು ಮಧುಕೈಟಭರನ್ನು ಕೊಂದು ನಿನ್ನನ್ನು ಕಾಪಾಡಿದ ಮಾತಿಗೆ ಏನು ಹೇಳುತ್ತೀ? ನಾನು ನಿನ್ನನ್ನು ಬೆಳೆಸಿ ದೊಡ್ಡವನನ್ನಾಗಿ ಮಾಡಿದುದನ್ನೂ, ದಾನವರು ನಿನ್ನ ಮೇಲೆ ಏರಿ ಬರುವಾಗ ನೀನು ಹೆದರಿ ಓಡಿದ ಸಂಗತಿಯನ್ನೂ ಮರೆಯುವಂಥ ರಾಜಸವಾದ ಜಡ ಬ್ರಹ್ಮಗುಣ ನಿನ್ನದು. ಏಕೆ ನಿನಗಿಷ್ಟು ಗರ್ವ? ಎಲ್ಲಿಂದ ಬಂತು ನಿನಗಿಷ್ಟು ಮರೆವು? ಇನ್ನಾದರೂ ತುಸು ಎಚ್ಚರಿಕೆಯಿಂದಿರು." ಎಂದನು.

"ನೀನು ಮಾತ್ರ ಜಂಬ ಹೇಳಿಕೊಳ್ಳುವುದಿಲ್ಲವೆ? ನೀನು ರಾಕ್ಷಸರೊಂದಿಗೆ ಯುದ್ಧ ಮಾಡುವಾಗ ಜಗ



ದಂಬೆ ನಿನಗೆ ಸಹಾಯ ಮಾಡಿದುದನ್ನು ಮರೆತೆಯಾ? ಅಂತಹ ನಿನಗೇಕೆ ಇಷ್ಟೆಲ್ಲ ಬಿಂಕ? ಅಂತಹ ನಿನ್ನ ಮಗನಾದ ನನಗೆ ನಿನಗಿಂತ ಹೆಚ್ಚು ಬಿಂಕವಿದ್ದರೆ ತಪ್ಪೇನಾಯಿತು?" ಎಂದ ಬ್ರಹ್ಮ.

"ನನ್ನನ್ನೇ ಮೀರಿಸುವವನೋ ನೀನು?" ಎಂದನು ವಿಷ್ಣು. ಹೀಗೆ ಬ್ರಹ್ಮ ವಿಷ್ಣುಗಳು ವಾದವಿವಾದ ಮಾಡಿಕೊಂಡಿರುವಾಗ ಅವರ ಮುಂದೆ ಒಂದು ಮಹಾ ಲಿಂಗವು ಕಾಣಬಂದಿತು. ಆ ಲಿಂಗದಿಂದ ಗಂಭೀರ ಸ್ವರದಲ್ಲಿ ಈ ಮಾತುಗಳು ಹೊರಟು ಬಂದುವು:

"ಓ ನಾರಾಯಣಾ! ಓ ಬ್ರಹ್ಮಾ! ನಿಮ್ಮ ವಾಗ್ವಾದವನ್ನು ಕಟ್ಟಿಟ್ಟು, ನಾನು ಹೇಳುವುದನ್ನು ಕೇಳಿರಿ. ಈ ಶ್ವೇತ ದ್ವೀಪದಲ್ಲಿ ಈಗ ಉದ್ಭವಿಸಿದ ಈ ಲಿಂಗದ ತಲೆಯನ್ನು ನೋಡಲು ಒಬ್ಬರೂ, ಬುಡವನ್ನು ನೋಡಲು ಒಬ್ಬರೂ ಹೋಗಿರಿ. ನಿಮ್ಮಲ್ಲಿ ಯಾರು ಮೊದಲು ತಿರುಗಿ ಬರುತ್ತಾನೋ ಅವನೇ ನಿಮ್ಮಿಬ್ಬರಲ್ಲಿ ದೊಡ್ಡವನು!"



ಇಬ್ಬರೂ ಇದಕ್ಕೆ ಒಪ್ಪಿಕೊಂಡರು. ಲಿಂಗದ ಬುಡವನ್ನು ನೋಡಲು ವಿಷ್ಣು ಪಾತಾಳಕ್ಕೂ, ಅದರ ತಲೆಯನ್ನು ನೋಡಿ ಬರಲು ಬ್ರಹ್ಮನು ಆಕಾಶಕ್ಕೂ ಹೊರಟರು.

ವಿಷ್ಣು ಪಾತಾಳದಲ್ಲಿ ಎಷ್ಟು ಆಳಕ್ಕೆ ಹೋದರೂ ಅದರ ಬುಡವು ಕಾಣಲೇ ಇಲ್ಲ. ತನಗೆ ಅದರ ಬುಡವು ಕಾಣಲಾರದೇನೋ ಎಂದು ವಿಷ್ಣು ತಲ್ಲಣಗೊಳ್ಳತೊಡಗಿದನು.

ಹಾಗೆಯೇ ಬ್ರಹ್ಮನು ಆಕಾಶದ ಮೇಲೆ ಎಷ್ಟು ಎತ್ತರಕ್ಕೆ ಹೋದರೂ ಲಿಂಗದ ತಲೆ ಕಾಣಲಿಲ್ಲ. ಬ್ರಹ್ಮನಿಗೆ ಬಹಳ ಲಜ್ಜೆಯೂ, ದುಃಖವೂ ಉಂಟಾಯಿತು. ಅವನು ಏನೂ ತೋರದೆ ಒಂದು ಕಡೆಯಲ್ಲಿ ನಿಂತಿರುವಾಗ, ಮೇಲಿನಿಂದ ಭೂಮಿಯ ಕಡೆಗೆ ಬೀಳುತ್ತಿದ್ದ ಒಂದು ಕೇದಿಗೆಯ ಹೂ ಕಂಡು ಬಂತು. ಬ್ರಹ್ಮನು ಅದನ್ನು ಹಿಡಿದು ಅತ್ಯಾನಂದದಿಂದ ವಿಷ್ಣು ಇರುವ ಸ್ಥಳಕ್ಕೆ ಹೋಗಿ, "ನಾನು ಲಿಂಗದ ತಲೆಯನ್ನು ನೋಡಿ ಬಂದೆ. ಅಲ್ಲಿದ್ದ ಈ ಕೇದಿಗೆ ಹೂವನ್ನು ತಂದೆ ನೋಡು!" ಎಂದನು.

ಆಗ ವಿಷ್ಣು ಆ ಕೇದಿಗೆ ಹೂವಿನೊಂದಿಗೆ "ನಿಜವೇನೆಂದು ನೀನೇ ಹೇಳಿಬಿಡು. ಈ ಬ್ರಹ್ಮ ನಿಜಕ್ಕೂ ಲಿಂಗದ ತಲೆಯನ್ನು ನೋಡಿದನೇನು? ನಿನ್ನನ್ನು ದೇವತೆಗಳು ನಿಜಕ್ಕೂ ಲಿಂಗದ ತಲೆಯ ಮೇಲೆ ಇರಿಸಿದರೇ? ನಿನ್ನನ್ನು ಬ್ರಹ್ಮನು ಅಲ್ಲಿಂದಲೇ ತೆಗೆದಿರುವನೆ?" ಎಂದು ಕೇಳಿದನು.

"ಹೌದು! ಬ್ರಹ್ಮ ಹೇಳಿದ್ದು ನಿಜವೇ!" ಎಂದು ಕೇದಿಗೆ ಹೂ ಸುಳ್ಳು ಹೇಳಿತು. ವಿಷ್ಣು ಆ ಮಾತನ್ನು ನಂಬದೆ, "ಲೋಕದಲ್ಲಿ ಅನೇಕ ಮಂದಿ ಹಣದ ಆಸೆಯಿಂದ ಕಳ್ಳ ಸಾಕ್ಷಿ ಹೇಳುತ್ತಾರೆ. ಈ ವಿಷಯದಲ್ಲಿ ಶಿವನ ಮಾತು ಹೊರತು ಇನ್ನಾರ ಮಾತನ್ನೂ ನಾನು ನಂಬಲಾರೆ. ನಮ್ಮನ್ನು ಈ ಕಾರ್ಯಕ್ಕೆ ಹೊರಡಿಸಿದ ಶಿವನೇ ಈಗ ಸತ್ಯ ಹೇಳಲಿ!" ಎಂದನು.

ಆಗ ಅಲ್ಲಿ ಲಿಂಗರೂಪವು ಅಂತರ್ಧಾನವಾಗಿ ಶಿವನೇ ಪ್ರತ್ಯಕ್ಷನಾದನು. ಶಿವನು ವಿಷ್ಣುವನ್ನು ನೋಡಿ, "ಕೇದಿಗೆ ಹೂ ಸುಳ್ಳು ಹೇಳಿತು. ಅದು ನನ್ನ ತಲೆಯ ಮೇಲಿನಿಂದ ಕೆಳಗೆ ಬೀಳುವಾಗ ದಾರಿಯಲ್ಲಿ ಬ್ರಹ್ಮನು ಅದನ್ನು ಹಿಡಿದು ಎತ್ತಿಕೊಂಡನೇ ಹೊರತು, ಅವನು ನನ್ನ ತಲೆಯನ್ನು ನೋಡಿದವನಲ್ಲ" ಎಂದನು.

ಆಗಲೇ ಶಿವನು ಕೇದಿಗೆ ತನ್ನ ಪೂಜೆಗೆ ಅನರ್ಹವಾಗಲೆಂದು ಶಾಪ ಕೊಟ್ಟನು. ಆ ಮೇಲೆ ಬ್ರಹ್ಮವಿಷ್ಣುಗಳು ಗರ್ವವಡಗಿ ತಮ್ಮ ದಾರಿ ಹಿಡಿದು ಹೋದರು.

ಮುನಿ ಸುರಥನಿಗೂ ಸಮಾಧಿಗೂ ಈ ಕಥೆಯನ್ನು ಹೇಳಿದ ಮೇಲೆ, ಹೀಗೆಂದನು:

"ಆದುದರಿಂದ ರಾಜಾ, ಮೋಹವನ್ನು ದಾಟಲು ಎಂಥವರಿಗೂ ಸಾಧ್ಯವಿಲ್ಲ. ಎಷ್ಟೇ ಪ್ರವೀಣ

ರಾದವರೂ ಸಹ ಮೋಹಪಾಶಕ್ಕೆ ಬೀಳುತ್ತಾರೆ. ಹಾಗೆ ಮೋಹಕ್ಕೆ ಬೀಳದಿರುವವಳು ಜಗದಂಬೆ ಯೊಬ್ಬಳೇ. ಆಕೆಯು ದಿವ್ಯ ಲಕ್ಷಣ ವಿಶೇಷಗಳನ್ನು ತಿಳಿದು ವ್ರತದೀಕ್ಷೆ ಹಿಡಿದವರು ಮಾತ್ರವೇ ಮೋಹ ಸಮುದ್ರವನ್ನು ದಾಟಬಲ್ಲವರು. ನೀವೂ ಅಂಥವ ರಾಗಿರಿ" ಎಂದನು.

"ಮಹಾತ್ಮರೇ, ಆ ವ್ರತದ ಲಕ್ಷಣಗಳೇನೆಂದು ಅಪ್ಪಣೆ ಮಾಡಬೇಕು" ಎಂದು ಸುರಥನು ಮುನಿ ಯನ್ನು ಕೇಳಿದನು. ಮುನಿ ಹೀಗೆಂದನು :

"ಅಂಬಾದೇವಿಯ ಪೂಜೆ ತುಂಬ ಶುಭಪ್ರದ ವಾದುದು. ಇದನ್ನು ಆಶ್ವಯುಜ ಮತ್ತು ಚೈತ್ರಮಾಸ ಗಳೆರಡರ ಪ್ರಾರಂಭದಲ್ಲಿಯೂ, ಒಂಭತ್ತು ದಿನಗಳ ವರೆಗೆ ಮಾಡಬೇಕು. ಈ ವ್ರತವನ್ನು ಆಚರಿಸು ವವನು ನಿರಾಹಾರಿಯಾಗಿ ಮಂತ್ರ ಜಪ ಮಾಡುತ್ತಾ, ತುಪ್ಪ, ಹಾಲು, ಸಕ್ಕರೆ ಬೆರೆಸಿದ ಪಾಯಸದಿಂದಾಗಲಿ, ಭಕ್ಷ್ಯಗಳಿಂದಾಗಲೀ, ಬಿಲ್ವಪತ್ರಗಳಿಂದಾಗಲೀ, ಹೋಮ ಮಾಡಿ ಬ್ರಾಹ್ಮಣ ಸಂತರ್ಪಣೆ ಮಾಡ ಬೇಕು. ನವರಾತ್ರಿ ಪೂಜೆ ಮಾಡುವವನು ಜಾತಿ ಭೇದ ನೋಡಬಾರದು. ಸ್ತ್ರೀಪುರುಷ ಭೇದವೂ ಇರಬಾರದು. ದೇವಿಯ ಪೂಜೆಗೆ ಆರು ಕೋಣ ಗಳಿರುವ ಯಂತ್ರವನ್ನೂ, ಅದರ ಪಕ್ಕದಲ್ಲಿ ಎಂಟು ಕೋಣಗಳಿರುವ ಯಂತ್ರವನ್ನೂ ರಚಿಸಬೇಕು. ನವಾ ಕ್ಷರೀ ಬೀಜಮಂತ್ರಗಳಿಂದ ಪ್ರಾಣಪ್ರತಿಷ್ಠೆ ಮಾಡಿ, ಮಂಡಲದ ಮಧ್ಯದಲ್ಲಿ ತಾಮ್ರದ ಕಲಶಪಾತ್ರವನ್ನಿಡ ಬೇಕು. ಅದಕ್ಕೆ ಷೋಡಶೋಪಚಾರ ಪೂಜೆಯನ್ನು ಮಾಡಬೇಕು. ಹೋಮವನ್ನೂ, ಅದರ ಹತ್ತು ಪಾಲು ತರ್ಪಣವನ್ನೂ, ತರ್ಪಣದ ಹತ್ತು ಪಾಲು ಬ್ರಾಹ್ಮಣ ಸಂತರ್ಪಣೆ ಮೊದಲಾದ ದಾನ ಧರ್ಮಗಳನ್ನೂ ಮಾಡಬೇಕು. ಹತ್ತನೇ ದಿನದಲ್ಲಿ ತಾನು ಪಾರಣೆ ಮಾಡಬೇಕು. ಈ ಪದ್ಧತಿಯಿಂದ ಮಹಾದೇವಿ ಯನ್ನು ಆರಾಧಿಸಿದವರಿಗೆ ಉತ್ತಮ ಲೋಕಗಳೂ,



ದೇವಿಯ ಸಹಾಯವೂ ಲಭಿಸುತ್ತವೆ. ರಾಜಾ, ದೇವೀ ಪೂಜೆಗೆ ಸಮಾನವಾದುದು ಇನ್ನೊಂದಿಲ್ಲ. ದೇವಿಯನ್ನು ಅರ್ಚಿಸುವುದರ ಮೂಲಕವಾಗಿ, ನಿನ್ನ ಬಂಧುಗಳೆಲ್ಲರನ್ನೂ, ಕಳೆದು ಹೋದ ವೈಭವ ಭಾಗ್ಯ ಗಳನ್ನೂ ತಿರುಗಿ ಸಂಪಾದಿಸಲು ಸಾಧ್ಯವಿದೆ. ಓ ವೈಶ್ಯೋತ್ತಮಾ, ನೀನು ಕೂಡಾ ದೇವಿಯ ಪೂಜೆ ಮಾಡು. ನಿನ್ನ ದುಃಖವೆಲ್ಲಾ ಶಮನವಾಗಿ ನೀನು ಮತ್ತೆ ಧನಿಕನಾಗುವೆ. ನಿನ್ನ ಇಚ್ಛೆ ಏನೋ ಅದೆಲ್ಲ ನೆರವೇರುತ್ತದೆ. ನಿಮಗಿಬ್ಬರಿಗೂ ದೇವಿಯ ವ್ರತ ದೀಕ್ಷೆಗೆ ತಕ್ಕ ಕಾಲವು ಇದೀಗ ಪಕ್ವವಾಗಿದೆ."

ಮುನಿ ಹೇಳಿದ ಈ ಮಾತುಗಳಿಗೆ ಆ ಇಬ್ಬರೂ ಸಂತೋಷಪಟ್ಟು "ಮಹಾತ್ಮಾ, ತಮ್ಮ ದಯದಿಂದ ನಮ್ಮ ಮನೋವ್ಯಥೆ ಹೋಯಿತು. ನೀವು ತೋರಿಸಿದ ಮಾರ್ಗವು ಮಂದಟ್ಟಾಯಿತು. ದಯವಿಟ್ಟು ನಮಗೆ ಆ ಮಂತ್ರವನ್ನು ಉಪದೇಶಮಾಡಬೇಕು." ಎಂದು ಕೇಳಿಕೊಂಡರು.

ಮುನಿ ಅವರಿಗೆ ನವಾಕ್ಷರ ಮಂತ್ರವನ್ನು ಬೀಜ ಮಂತ್ರ ಸಹಿತವಾಗಿ ಉಪದೇಶಮಾಡಿದನು. ಅವರು ಮುನಿಯಿಂದ ಅಪ್ಪಣೆ ಪಡೆದುಕೊಂಡು, ಒಂದು ನದೀ ತೀರದ ನಿರ್ಜನ ಪ್ರದೇಶಕ್ಕೆ ಹೋದರು. ಅವರಿಗೆ ನವರಾತ್ರಿ ವ್ರತಮಾಡಲು ಸಾಧ್ಯವಿಲ್ಲದುದರಿಂದ, ಅಲ್ಲಿಯೇ ಕುಳಿತು ಎಲೆ ಚಿಗುರಗಳನ್ನೇ ಸ್ವೀಕರಿಸುತ್ತ ಎರಡು ವರ್ಷ ಆ ಮಂತ್ರವನ್ನು ಜಪಿಸಿದರು.

ಒಂದು ದಿನ ಸ್ವಪ್ನದಲ್ಲಿ ಅವರಿಗೆ ಮಹಾದೇವಿ ಕೆಂಪು ಸೀರೆಯನ್ನು ಧರಿಸಿದವಳಾಗಿ ಕಾಣಿಸಿದಳು. ಆದರೂ ಅವರು ತಪಸ್ಸನ್ನು ಬಿಡದೆ ಮುಂದುವರಿಸುತ್ತ, ಮೂರನೇ ವರ್ಷದಲ್ಲಿ ಜಲವನ್ನು ಮಾತ್ರವೇ ಸ್ವೀಕರಿಸಿ ತಪಸ್ಸು ಮಾಡಿದರು. ಆದರೂ ದೇವಿಯ ಸಾಕ್ಷಾತ್ಕಾರವಾಗಲಿಲ್ಲ.

ಕಡೆಗೆ ಅವರು ಆತ್ಮಾಹುತಿ ಮಾಡಿಕೊಳ್ಳಲು ನಿಶ್ಚಯಿಸಿ, ಒಂದು ಹೊಂಡವನ್ನು ತೋಡಿ ಹೋಮ ಕುಂಡಮಾಡಿ, ಅದರಲ್ಲಿ ಅಗ್ನಿಯನ್ನು ಉರಿಸಿ, ತಮ್ಮ ಮಾಂಸವನ್ನು ಕೊಯಿದು ಹೋಮಮಾಡುವಷ್ಟರಲ್ಲಿ ದೇವಿ ಅವರ ಮುಂದೆ ಪ್ರತ್ಯಕ್ಷಳಾಗಿ, "ಸಾಕು ನಿಲ್ಲಿಸಿರಿ. ನಿಮ್ಮ ಸಾಹಸಕ್ಕೆ ಮೆಚ್ಚಿದೆನು. ವರ ಕೇಳಿರಿ" ಎಂದಳು.

ಸುರಥನು, "ತಾಯೇ! ಶತ್ರುಗಳಿಂದ ಸೋತು ರಾಜ್ಯಭ್ರಷ್ಟನಾಗಿ, ಇಷ್ಟು ಕಾಲದ ಮೇಲೆ ನನ್ನ ಪುಣ್ಯ ಫಲಿಸಿ ನಿನ್ನ ದರ್ಶನವಾಯಿತು. ನನ್ನ ರಾಜ್ಯವು ಮೊದಲಿನಂತೆ ನನಗೆ ಬರುವ ಹಾಗೆ ಮಾಡಮ್ಮಾ" ಎಂದು ಬೇಡಿದನು.

"ನೀನು ನಿನ್ನ ಶತ್ರುಗಳನ್ನು ಓಡಿಸುವಿ. ನಿನ್ನ ಮಂತ್ರಿಗಳು ನಿನ್ನ ಸೇವೆಗೆ ಬರುತ್ತಾರೆ. ನೀನು ಸಾವಿರ ವರ್ಷ ಸುಖವಾಗಿ ರಾಜ್ಯವಾಳುವಿ. ನಿನಗೆ ಒಳ್ಳೆಯ ಕಾಲವು ಸಮೀಪಿಸಿತು" ಎಂದಳು ಮಹಾದೇವಿ.

ಸುರಥನು ಅತ್ಯುತ್ಸಾಹದಿಂದ ಮಹಾಶಕ್ತಿವಂತನಾಗಿ ತನ್ನ ಕುದುರೆಯ ಮೇಲೇರಿಕೊಂಡು ಹೋಗಿ, ಪ್ರಜೆಗಳ ಸಹಾಯದಿಂದ ಶತ್ರುಗಳನ್ನು ಜಯಿಸಿ, ಮತ್ತೆ ಚಿರಕಾಲ ರಾಜ್ಯವನ್ನಾಳುತ್ತ ಹೆಂಡತಿ ಮಕ್ಕಳೊಂದಿಗೆ ಸುಖವಾಗಿದ್ದು, ಕಡೆಗೆ ದೇವೀ ಸಾಯುಜ್ಯ ಹೊಂದಿದನು.

ವೈಶ್ಯ ಸಮಾಧಿ ಮಾತ್ರ, "ತಾಯೇ, ನನಗೆ ಸಿರಿ ಸಂಪತ್ತುಗಳೇನೂ ಬೇಡ. ಶಾಶ್ವತ ಸುಖವೇ ಬೇಕು" ಎಂದು ಬೇಡಿದನು. ದೇವಿಯ ಮಂತ್ರ ಜಪತಪಸ್ಸಿನಿಂದಾಗಿ ಅವನ ಮೋಹ ಪಾಶಗಳು ಪೂರ್ತಿ ಕಳಚಿದ್ದುವು. ದೇವಿ ಅವನಿಗೆ ದಿವ್ಯ ಜ್ಞಾನವನ್ನು ಕೊಟ್ಟಳು. ಅವನು ಜೀವಿತಾಂತದವರೆಗೂ ನಿಸ್ಸಂಗನಾಗಿ ತೀರ್ಥ ಯಾತ್ರೆ ಮಾಡುತ್ತ, ಆತ್ಮಾನಂದದೊಂದಿಗೆ ದೇವೀ ಸಾಯುಜ್ಯ ಪಡೆದನು.





# ತಪ್ಪುಗಾರ

ಅನೇಕ ವರ್ಷಗಳ ಹಿಂದೆ ಒಂದಾನೊಂದು ದೇಶದಲ್ಲಿ ಧನಿಕನಾದ ವರ್ತಕನೊಬ್ಬನಿದ್ದನು. ಅವನಿಗೆ ಮೂವರು ಗಂಡು ಮಕ್ಕಳಿದ್ದರು, ಮೂವರು ಮಕ್ಕಳೂ ದೊಡ್ಡವರಾದರು. ತಂದೆ ಮುದುಕನಾಗಿ ಸಾಯುವುದಕ್ಕೆ ಮೊದಲು ಮೂವರು ಕುಮಾರರನ್ನು ತನ್ನ ಬಳಿಗೆ ಕರೆದು. "ಕಂದಗಳಿರಾ, ನನ್ನನ್ನು ಕರೆದೊಯ್ಯಲು ಯಮದೂತರು ಹೊರಟಿದ್ದಾರೆ. ನಾನು ತುಂಬಾ ಶ್ರಮಪಟ್ಟು ತುಂಬಾ ಆಸ್ತಿ ಸಂಪಾದಿಸಿದ್ದೇನೆ. ಆ ಎಲ್ಲಾ ಆಸ್ತಿಗಳಲ್ಲಿ ಬೆಲೆಬಾಳುವಂತಹವೆಂದರೆ ಮೂರು ರತ್ನಗಳು. ನೀವು ಯಾವ ಕಾರಣದಿಂದಾದರೂ ಬೇರೆ ಬೇರೆ ಭಾಗ ಮಾಡಿಕೊಳ್ಳುವ ಪರಿಸ್ಥಿತಿ ಬಂದರೆ, ಈ ಮೂರು ರತ್ನಗಳನ್ನೂ ನೀವು ಮೂವರೂ ಒಂದೊಂದು ತೆಗೆದುಕೊಳ್ಳಿರಿ. ಆ ಮೂರರ ಬೆಲೆಯೂ ಒಂದೇ. ಹೆಚ್ಚು ಕಡಿಮೆ ಏನಿಲ್ಲ" ಎಂದು ಹೇಳಿದನು.

ಮುಂದೆ ಕೆಲವೇ ದಿನಗಳಲ್ಲಿ ಅವನು ತೀರಿ ಹೋದನು. ಅನಂತರ ಸ್ವಲ್ಪ ಕಾಲ ಕಳೆದ ಮೇಲೆ ಮೂವರು ಅಣ್ಣ ತಮ್ಮಂದಿರೂ ತಮ್ಮೊಳಗೆ ಪಾಲು ಮಾಡಿಕೊಳ್ಳುವುದು ಒಳ್ಳೆಯದೆಂಬ ನಿರ್ಣಯಕ್ಕೆ ಬಂದರು. ಇರುವ ಆಸ್ತಿಯಲ್ಲಿ ಮುಖ್ಯವಾದುದು ಆ ಮೂರು ರತ್ನಗಳಾದುದರಿಂದ ತಲಾ ಒಂದೊಂದು ತೆಗೆದುಕೊಳ್ಳೋಣವೆಂದು ಮೂವರೂ ಒಟ್ಟಿಗೆ ಕುಳಿತು ಆ ರತ್ನ ಪೇಟಿಕೆಯನ್ನು ತೆರೆದರು. ನೋಡಿದಾಗ ಅದರೊಳಗೆ ಎರಡೇ ರತ್ನಗಳಿದ್ದುವು! ಮೂರನೇದನ್ನು ಯಾರೋ ಕದ್ದಿದ್ದಾರೆ. ಆ ಕಳ್ಳನು ಈ ಅಣ್ಣ ತಮ್ಮಂದಿರೊಳಗೆ ಯಾರೋ ಒಬ್ಬನೇ. ಪರಕೀಯನಿಂದ ಕಳ್ಳತನವಾಗಲು ಸಾಧ್ಯವೇ ಇಲ್ಲ. ಆ ಮೂವರಲ್ಲಿ ಯಾರು ಕದ್ದವನು ?

"ನಮ್ಮೊಳಗೆ ಒಬ್ಬನು ರತ್ನವೊಂದನ್ನು ತೆಗೆದಿದ್ದಾನೆ. ಹಾಗಂತ ನಾವು ನಮ್ಮೊಳಗೆ ಬೈದಾಡಿಕೊಂಡಿರುವುದು ಉಚಿತವಲ್ಲ. ಅದೆಲ್ಲ ಬೇಡ. ಏನೋ ಆತುರಪಟ್ಟು, ಅಥವಾ ಮತ್ತೇನೋ ಆಶೆಯಿಂದ ರತ್ನವನ್ನು ತೆಗೆದವನು, ತಾನೇ ಆ ಕೆಲಸಮಾಡಿದೆನೆನ್ನಲು ಶಂಕಿಸಬಹುದು. ಯಾರಿಗೂ ಅವಮಾನವಾಗದಂತೆ, ಯಾರಿಗೂ ಅನ್ಯಾಯವಾಗದಂತೆ ನಾಳೆ ಕತ್ತಲಾಗುವುದರೊಳಗೆ ರತ್ನವನ್ನು ತೆಗೆದವನು ಯಥಾಸ್ಥಾನದಲ್ಲಿ ಇರಿಸಿಬಿಡ ತಕ್ಕದ್ದು" ಎಂದ ದೊಡ್ಡಣ್ಣ.

"ಇಡದಿದ್ದರೆ ?" ಎಂದು ಎರಡನೇಯವನು ಕೇಳಿದನು. "ಇಡದಿದ್ದರೆ ನಾವು ಮೂವರೂ ಮಹಾ

**೨೫ ವರ್ಷಗಳ ಹಿಂದಿನ ಚಂದಮಾಮ ಕಥೆ**



ರಾಜರ ಹತ್ತಿರ ಹೋಗಿ ಫಿರ್ಯಾದಿ ಮಾಡೋಣ. ಇಂತಹ ತಪ್ಪುಗಳನ್ನು ಸರಿಮಾಡುವ ಭಾರವು ಮಹಾರಾಜರದು ತಾನೇ, ಅವರು ಹೇಳಲಿ ನ್ಯಾಯವಾದ ತೀರ್ಪು" ಎಂದ ದೊಡ್ಡಣ್ಣ.

"ಹೌದು. ಈ ಆಲೋಚನೆ ಬಹಳ ಚೆನ್ನಾಗಿದೆ" ಎಂದು ಮೂರನೆಯವನು ತಲೆಯಾಡಿಸಿದನು.

ಮತ್ತೊಂದು ದಿನ ಕಳೆಯಿತು. ಕಾಣದೇ ಹೋದ ರತ್ನ ತಿರುಗಿ ಬರಲೇ ಇಲ್ಲ. ಆ ಮೇಲೆ ನಿಶ್ಚಯಿಸಿಕೊಂಡ ಹಾಗೆ ಆ ಮೂವರು ಅಣ್ಣ ತಮ್ಮಂದಿರೂ ಮಹಾರಾಜನ ಮನೆಗೆ ಹೋಗಿ, ರಾಜನನ್ನು ಕಂಡು ನಡೆದ ಸಂಗತಿಯನ್ನೆಲ್ಲಾ ಹೇಳಿ, ತಮ್ಮ ಮೂವರೊಳಗೆ ಯಾರು ಕಳ್ಳನೆಂಬುದನ್ನು ನಿರ್ಣಯಿಸಿ ಹೇಳಬೇಕೆಂದು ಕೇಳಿಕೊಂಡರು.

ಅವರು ಹೇಳಿದುದನ್ನೆಲ್ಲ ಕೇಳಿ ರಾಜನು ತುಂಬಾ ಬೆರಗಾದನು. ಆ ಮೂವರು ಅಣ್ಣ ತಮ್ಮಂದಿರನ್ನೂ ರಾಜನು ಚೆನ್ನಾಗಿ ಬಲ್ಲನು.

"ನಿಮ್ಮ ತಂದೆ ಬಹಳ ನ್ಯಾಯವಂತರು. ನನಗೆ ಬಹಳ ಆಪ್ತರಾಗಿದ್ದರು. ಒಳ್ಳೆಯ ಆಲೋಚನೆಕೂಡಾ ಹೇಳುತ್ತಿದ್ದರು, ಅವರ ಕುಮಾರರಾದ ನೀವು ತಂದ ಸಮಸ್ಯೆಯನ್ನು ಕೇಳಿ ಸಂತೋಷವೂ ಆಗುತ್ತದೆ, ಆಶ್ಚರ್ಯವೂ ಆಗುತ್ತದೆ, ಚಿಂತೆಯೂ ಬರುತ್ತದೆ. ನಿಮ್ಮೊಳಗೆ ಇದನ್ನು ಬಿಡಿಸಲಿಕ್ಕೆ ಆಗದುದರಿಂದಲೇ ನೀವು ನನ್ನ ಮುಂದೆ ಬಂದು ಹೇಳಿದ್ದೀರಿ. ಕೆಲವು ದಿನಗಳಲ್ಲಿ ನಿಮ್ಮ ಸಮಸ್ಯೆ ಬಿಡಿಸಿಕೊಡುತ್ತೇನೆ. ಅದುವರೆಗೆ ನೀವು ನಗರದ ಅಡುಗೂಲವ್ವನ ಮನೆಯಲ್ಲಿ ತಂಗಿಕೊಂಡಿರಿ. ಅಲ್ಲಿ ನಿಮಗೆ ಬೇಕಾದ ಎಲ್ಲಾ ಸೌಕರ್ಯಗಳನ್ನೂ ಮಾಡಿಸುತ್ತೇನೆ" ಎಂದನು ರಾಜ.

ಅದರಂತೆ ಆ ಮೂವರು ಅಣ್ಣ ತಮ್ಮಂದಿರೂ ಅಡಗೂಲವ್ವನ ಮನೆಗೆ ಹೋಗಿ ವಸತಿ ಮಾಡಿಕೊಂಡರು. ರಾಜನ ಅನುಮತಿಯಿಂದ ಬಂದವರೆಂದು ತಿಳಿದು ಅಡುಗೂಲವ್ವನೂ ಅವರನ್ನು ಚೆಂದಾಗಿ ನೋಡಿಕೊಂಡಳು.

ರಾಜನು ಮಾತ್ರ ರಾತ್ರೀ ಹಗಲು ಆ ಮೂವರ ಸಮಸ್ಯೆಯನ್ನು ಕುರಿತೇ ಆಲೋಚಿಸಿಕೊಂಡಿದ್ದನು. ಆ ಸಮಸ್ಯೆಯನ್ನು ಹೇಗೆ ಬಿಡಿಸುವುದೆಂಬುದು ರಾಜನಿಗೆ ಗೊತ್ತಾಗಲಿಲ್ಲ. ಅಡುಗೂಲವ್ವನ ಮನೆಯ ಸುತ್ತಲೂ ಗೂಢಚಾರರಿದ್ದರು, ಅವರಿಂದಲೂ ಯಾವ ಸುದ್ದಿಯೂ ಇಲ್ಲ. ಕಡೆಗೆ ರಾಜನು ಅಡುಗೂಲಜ್ಜಿಯನ್ನೇ ತನ್ನ ಬಳಿಗೆ ಕರೆಯಿಸಿಕೊಂಡು, "ಏನವ್ವಾ, ನಾನು ಕಳುಹಿಸಿದ ಆ ಮೂವರು ಅತಿಥಿಗಳಿಂದ ನಿನಗೇನಾದರೂ ತೊಂದರೆಯಾಯಿತೇ?" ಎಂದು ಕೇಳಿದನು.

"ಇಲ್ಲ ಮಹಾಪ್ರಭುಗಳೇ. ಅವರು ಮೂವರೂ ಬಹಳ ಒಳ್ಳೆಯವರು. ದೊಡ್ಡ ಗುಣ ಉಳ್ಳವರು. ತುಂಬಾ ಮರ್ಯಾದಸ್ತರು" ಎಂದಳು ಅಡುಗೂಲವ್ವ.

"ಆದುದರಿಂದಲೇ ಏನೂ ಗೊತ್ತಾಗುವುದಿಲ್ಲ. ಆ ಮೂವರಲ್ಲಿ ಒಬ್ಬನು ಸಾಹಸಿಯಾದ ಕಳ್ಳ! ಅದು

ಯಾರೆಂದು ಗೊತ್ತಾಗಬೇಕಾಗಿದೆ!" ಎಂದ ರಾಜ. ಅಡುಗೂಲವ್ವ ಆಶ್ಚರ್ಯದಿಂದ, ಅದೇನು ವಿವರವೆಂದು ಕೇಳಿದಳು. ರಾಜನು ಎಲ್ಲಾ ಸಮಾಚಾರವನ್ನೂ ಅವಳೊಂದಿಗೆ ಹೇಳಿದನು.

"ಅವರಲ್ಲಿ ಯಾವನು ಕಳ್ಳಬುದ್ಧಿ ಯುಳ್ಳವನು ಎಂಬುದು ಗೊತ್ತಾಗಬೇಕು ಅಲ್ಲವೆ? ನಾನು ಹೇಗಾದರೂ ಕಂಡುಹಿಡಿಯುತ್ತೇನೆ. ಅದನ್ನು ನನಗೇ ಬಿಟ್ಟು ಬಿಡಿ ಪ್ರಭುಗಳೇ" ಎಂದಳು ಅಡುಗೂಲವ್ವ.

ಇದನ್ನು ರಾಜನು ಮೊದಲೇ ಹೇಳಿದ್ದರೆ ಯಾವಾಗಲೋ ಕಂಡುಹಿಡಿಯುತ್ತಿದ್ದೆನೆಂದು ಅವ್ವನಿಗೆ ತೋರಿತು. ತನ್ನ ಮನೆಯಲ್ಲಿದ್ದವನಿಗೆ ನಗರದಲ್ಲೆಲ್ಲಿ ಯಾದರೂ ಕಳವು ಮಾಡುವ ಬುದ್ಧಿ ಹುಟ್ಟುತ್ತದೇನೋ ಎಂದು ರಾಜನು ಇಷ್ಟು ದಿನ ಪರೀಕ್ಷಿಸಿರಬೇಕು, ಎಂದುಕೊಂಡಳು.

ಆ ದಿನ ರಾತ್ರಿ ಅಡುಗೂಲವ್ವ ಆ ಮೂವರು ಅಣ್ಣ ತಮ್ಮಂದಿರಿಗೆ ಊಟ ಬಡಿಸುವಾಗ, ಒಂದು ಚಿಕ್ಕ ಕಥೆಯನ್ನು ಹೇಳಿದಳು. ಆ ಕಥೆ ಹೀಗಿತ್ತು:

"ಒಂದಾನೊಂದು ದೇಶಕ್ಕೆ ಸಿಂಹಕೇತುವೆಂಬವನು ರಾಜನಾಗಿದ್ದ. ಅವನಿಗೆ ಹೆಸರಿಗೆ ತಕ್ಕ ಹಾಗೆಯೇ ಗುಣಗಳೂ ಇರುವಂತಹ ಗುಣವತಿ ಎಂಬ ಹೆಸರಿನ ಒಬ್ಬಳೇ ಮಗಳು. ಅವಳಿಗೆ ಮದುವೇ ವಯಸ್ಸು ಬರುವ ವರೆಗೂ ಒಬ್ಬ ಪಂಡಿತನ ಹತ್ತಿರ ವಿದ್ಯೆ ಕಲಿಸಿದರು. ಅವಳ ಮದುವೆಯ ಪ್ರಯತ್ನಗಳು ಪ್ರಾರಂಭವಾದ ಕೂಡಲೇ ವಿದ್ಯೆ ಸಾಕುಮಾಡಿದರು. ಆಮೇಲೆ ಒಂದು ದಿನ ಅವಳು ತನ್ನ ಗುರುವಿನ ಬಳಿಗೆ, ಹೊಸ ಬಟ್ಟೆಗಳನ್ನೂ, ಆಭರಣಗಳನ್ನೂ, ಸ್ವಲ್ಪ ಧನವನ್ನೂ ತೆಗೆದುಕೊಂಡು ಹೋಗಿ ಗುರುವಿಗೆ ದಕ್ಷಿಣೆ ಕಾಣಿಕೆ ಸಮರ್ಪಿಸಿದಳು. ಆದರೆ ಗುರು ಅವುಗಳನ್ನು ಮುಟ್ಟದೆ, "ನಾನು ನಿನ್ನ ಗುರು. ನಾನು ನಿನ್ನಿಂದ ಗುರುದಕ್ಷಿಣೆ ಕಾಣಿಕೆ ತೆಗೆದುಕೊಳ್ಳಬೇಕಾದರೆ, 'ನೀನು ಮದುವೆಯಾಗಿ ಇನ್ನೊಬ್ಬನ ವಶಳಾಗುವುದಕ್ಕೆ ಮೊದಲು, ಒಂದು ರಾತ್ರಿ ನನ್ನ ಬಳಿಗೆ ಸರ್ವಾಭರಣ ಭೂಷಿತೆಯಾಗಿ ಒಬ್ಬಳೇ ಬರಬೇಕು,' ಎಂದನು.





ಗುಣವತಿ ಹಾಗೆಯೇ ಆಗಲೆಂದು ಒಪ್ಪಿ, ತಾನು ತಂದುದನ್ನೆಲ್ಲ ಹಿಂದೆ ತೆಗೆದುಕೊಂಡು ಹೋದಳು.

"ತರುವಾಯ ಅವಳಿಗೆ ಮದುವೆಯಾಯಿತು. ಮದುವೆಯಾದ ದಿನ ರಾತ್ರಿ ಅವಳು ತನ್ನ ಗಂಡನೊಂದಿಗೆ, ತನ್ನ ಗುರು ಹೇಳಿದುದನ್ನೂ, ತಾನು ಒಪ್ಪಿದುದನ್ನೂ ಹೇಳಿದಳು. 'ಸರಿ, ಹೋಗಿಬಾ' ಎಂದ ಗಂಡ.

"ಗುಣವತಿ ಇರುವ ನಗಗಳನ್ನೆಲ್ಲಾ ಧರಿಸಿಕೊಂಡು, ರಾತ್ರಿಯಲ್ಲಿ ಗುರುವಿನ ಮನೆಗೆ ಹೋಗುವಾಗ, ಒಬ್ಬ ಕಳ್ಳನು ಅವಳನ್ನು ತಡೆದು, ನಗಗಳನ್ನೆಲ್ಲಾ ಕೊಡಲು ಕೇಳಿದನು. ಇಲ್ಲದಿದ್ದರೆ ಕೊಲ್ಲುವೆನೆಂದು ಹೆದರಿಸಿದನು. ಗುಣವತಿ ಕಳ್ಳನ ಹತ್ತಿರ ತನ್ನ ಗುರುದಕ್ಷಿಣೆಯ ಸಮಾಚಾರ ಹೇಳಿ, ಹಿಂದಿರುಗಿ ಬರುವಾಗ ಎಲ್ಲಾ ನಗಗಳನ್ನೂ ಕೊಡುವೆನೆಂದಳು. ಸರಿ ಎಂದು ಕಳ್ಳ ಅವಳನ್ನು ಮುಂದೆ ಹೋಗಲು ಬಿಟ್ಟ.

"ಗುಣವತಿ ಗುರುವಿನ ಮನೆಯನ್ನು ತಲಪಿದಳು, ಗುರು ತನ್ನ ಶಿಷ್ಯಳ ಸತ್ಯ ಸಂಧತೆಯನ್ನು ನೋಡಿ ಮೆಚ್ಚಿಕೊಂಡು ಸಂತೋಷದಿಂದ, 'ಅಮ್ಮಾ, ನಾನು ನಿನಗೆ ಕಲಿಸಿದ ವಿದ್ಯೆ ಸಾರ್ಥಕವಾಯಿತು. ಎಂತಹ ಅಪಾಯ ಬರುವುದೆಂಬುದನ್ನೂ ಯೋಚಿಸದೆ, ಹೇಳಿದ ಮಾತು ನಡೆಯಿಸಿರುವಿ. ಇದೇ ನನಗೆ ನಿನ್ನ ಸರಿಯಾದ ಗುರುದಕ್ಷಿಣೆಯಾಯಿತು. ನೀನು ಹೋಗಿ ನಿನ್ನ ಗಂಡನೊಂದಿಗೆ ಸುಖವಾಗಿರು.' ಎಂದು ಮನಃಪೂರ್ವಕವಾಗಿ ಆಶೀರ್ವಾದ ಮಾಡಿದನು.

"ಗುಣವತಿ ಗುರುವಿಗೆ ನಮಸ್ಕಾರಮಾಡಿ ಹಿಂದರುಗಿ ಮನೆಗೆ ಹೊರಟಳು. ದಾರಿಯಲ್ಲಿ ತನಗಾಗಿ ಕಾದಿದ್ದ ಕಳ್ಳನನ್ನು ನೋಡಿ, 'ಇಕೋ ಅಪ್ಪಾ, ನಗಗಳನ್ನೆಲ್ಲಾ ಕೊಡುತ್ತೇನೆ; ತೆಗೆದುಕೋ' ಎಂದು ನಗಗಳನ್ನು ಕಳಚಲು ತಯಾರಾದಳು.

"ಆ ಮಾತಿನಿಂದ ಕಳ್ಳನ ಹೃದಯವು ಬದಲಾಯಿಸಿ ಹೋಯಿತು. ಆವನು ಗುಣವತಿಯ ಕಾಲಿಗೆ ಬಿದ್ದು, 'ಕ್ಷಮಿಸಮ್ಮಾ. ನಿನ್ನಂಥವರಿರುವ ಈ ಪ್ರಪಂಚದಲ್ಲಿ ನಾನು ಕಳ್ಳತನಮಾಡಿ ಬದುಕಲಾರೆ!' ಎಂದು ಹೇಳಿ ಕತ್ತಲೆಯಲ್ಲಿ ಎತ್ತಲೋ ಹೋಗಿಬಿಟ್ಟನು.

"ಗುಣವತಿ ಗಂಡನ ಬಳಿಗೆ ಹಿಂದಿರುಗಿ ಬಂದು, ನಡೆದ ಸಮಾಚಾರವನ್ನೆಲ್ಲಾ ಹೇಳಿದಳು. ಗಂಡನು ತುಂಬಾ ಸಂತೋಷಪಟ್ಟು ಗುಣವತಿಯೊಂದಿಗೆ ಚಿರಕಾಲ ಬದುಕಿಕೊಂಡಿದ್ದನು".

ಅವ್ವ ಹೇಳಿದ ಈ ಕಥೆಯನ್ನು ಕೇಳಿ ಮೂವರು ಅಣ್ಣ ತಮ್ಮಂದಿರೂ ಬಹಳ ಸಂತೋಷ ವ್ಯಕ್ತಪಡಿಸಿದರು.

ಆಗ ಅವ್ವ, "ನನಗೊಂದು ಸಂದೇಹ. ಈ ಕಥೆಯಲ್ಲಿ ಒಬ್ಬರಿಗಿಂತ ಹೆಚ್ಚುಮಂದಿ ಉದಾರ ಗುಣದವರಿದ್ದಾರಷ್ಟೆ? ಅವರಲ್ಲಿ ಎಲ್ಲರಿಗಿಂತ ಹೆಚ್ಚಿನ ಔದಾರ್ಯ ಗುಣವು ಯಾರದೂ ಅಂತ? ಅಪ್ಪಗಳಿರಾ! ನೀವಾದರೂ ಹೇಳಿ ನನ್ನ ಅನುಮಾನ

ತೀರಿಸುವಿರಾ? " ಎಂದು ಕೇಳಿದಳು. ದೊಡ್ಡವನು ತುಸು ಆಲೋಚಿಸಿ, "ಮದುವೆಯಾದ ರಾತ್ರಿಯಲ್ಲಿ ತನ್ನ ಹೆಂಡತಿಯನ್ನು ಗುರುವಿನ ಬಳಿಗೆ ಕಳುಹಿಸಿದ ಅವಳ ಗಂಡನ ಔದಾರ್ಯವೇ ದೊಡ್ಡದು" ಎಂದು ಹೇಳಿದನು.

"ಅದಕ್ಕಿಂತ ಗುರುವಿನ ಔದಾರ್ಯ ದೊಡ್ಡದು ಗೊತ್ತಾ? " ಎಂದ ಎರಡನೆಯವನು.

"ಅದೇನಲ್ಲ. ಕೈಗೆ ಸಿಕ್ಕಿದ ರಾಜಕುಮಾರಿಯ ನಗಗಳನ್ನು ತೆಗೆದುಕೊಳ್ಳದೆ ಬಿಟ್ಟ ಕಳ್ಳನ ಔದಾರ್ಯವೇ ದೊಡ್ಡದು!" ಎಂದ ಮೂರನೇ ತಮ್ಮ.

"ಗಂಡನ ಕೋಪವನ್ನೂ, ಗುರುವಿನಿಂದಾಗಲಿರುವ ಅವಮಾನವನ್ನೂ, ಕಳ್ಳನ ದುರಾಶೆಯನ್ನೂ ಎದುರಿಸಲು ಸಿದ್ಧಳಾದ ಗುಣವತಿಯ ಔದಾರ್ಯವು ನಿಮ್ಮಲ್ಲಿ ಒಬ್ಬರಿಗೂ ಹಿಡಿಸಿಲ್ಲವೆಂದಾಯಿತು." ಎಂದು ನಕ್ಕಳು ಅಡುಗೂಲವ್ವ.

ಅನಂತರ ತಡಮಾಡದೆ ಅಡುಗೂಲವ್ವ ರಾಜನ ಬಳಿಗೆ ಹೋಗಿ, "ಮಹಾಪ್ರಭು! ನಮ್ಮ ಮನೆಯಲ್ಲಿರುವ ಮೂವರು ಅಣ್ಣ ತಮ್ಮಂದಿರೊಳಗೆ ನಿಶ್ಚಯವಾಗಿಯೂ ಮೂರನೆಯವನಿಗೇ ಕಳ್ಳಬುದ್ಧಿ ಇದೆ. ನೀವು ಹೇಳಿದ ಸಮಸ್ಯೆಯಲ್ಲಿ ತಪ್ಪುಗಾರ ಆ ಮೂರನೆಯವನೇ. ವಿಚಾರಿಸಿ ನಿಜ ತಿಳಿದುಕೊಳ್ಳಿ!" ಎಂದಳು.

ಅವಳ ಊಹೆಗೆ ಕಾರಣವೇನೆಂದು ರಾಜನು ಕೇಳಿದನು. ಅವ್ವ ತಾನು ಹೇಳಿದ ಕಥೆಯನ್ನು ಹೇಳಿ, "ಆ ಹುಡುಗನಿಗೆ ಕಳ್ಳಬುದ್ಧಿ ಇದ್ದುದರಿಂದಲೇ ಕಳ್ಳನ ಔದಾರ್ಯವೇ ದೊಡ್ಡದೆಂದನು. ಅಂದರೆ ಕಳ್ಳನ ಔದಾರ್ಯ ಅವನನ್ನು ಆಶ್ಚರ್ಯಪಡಿಸಿದೆಯೆಂದಾಯಿತು." ಎಂದಳು.

ಅಡುಗೂಲವ್ವನ ಮಾತಿನಲ್ಲಿ ಸತ್ಯವಿರುವುದೆಂದು ತಿಳಿದು ರಾಜನು ಅವಳ ಬುದ್ಧಿ ಶಕ್ತಿಯನ್ನು ಮೆಚ್ಚಿದನು. ಅವಳನ್ನು ಬಹುಮಾನಿಸಿ ಕಳುಹಿಸಿ ಮೂವರು ಅಣ್ಣತಮ್ಮಂದಿರನ್ನೂ ಕರೆಯಿಸಿ ರಾಜನು, "ನಿಮ್ಮೊಳಗಿನ ಸಮಸ್ಯೆ ಬಗೆ ಹರಿಯಿತು. ರತ್ನ ಪೇಟಿಕೆಯಲ್ಲಿದ್ದ ಎರಡು ರತ್ನಗಳನ್ನು ದೊಡ್ಡವರಿಬ್ಬರು ಮಾತ್ರ ತೆಗೆದುಕೊಳ್ಳಿ! ಸಾಕು! ಅದೇ ನ್ಯಾಯ " ಎಂದನು.

ಮೂರನೆಯವನು ಅಣ್ಣಂದಿರ ಮುಖವನ್ನು ನೋಡಲಾಗದೆ ತಲೆ ತಗ್ಗಿಸಿಕೊಂಡನೇ ಹೊರತು, ರಾಜನು ಹೇಳಿದ ನ್ಯಾಯಕ್ಕೆ ವಿರುದ್ಧವಾಗಿ ಏನೂ ಹೇಳಲಿಲ್ಲ.

ತರುವಾಯ ಮೂವರು ಅಣ್ಣತಮ್ಮಂದಿರೂ ಮನೆಗೆ ಹೋಗಿ, ತಂದೆಯ ಉಳಿದ ಆಸ್ತಿಗಳನ್ನು ತಕರಾರಿಲ್ಲದೆ ಪಾಲುಮಾಡಿಕೊಂಡು, ಬೇರೆ ಬೇರೆಯಾಗಿ, ಸಹೋದರ ಭಾವದಿಂದ ಸುಖವಾಗಿದ್ದರು.



## ಫೋಟೋ ಶೀರ್ಷಿಕೆಯ ಸ್ಪರ್ಧೆ :: ಬಹುಮಾನ ರೂ. ೨೫

**ಗೆದ್ದ ಶೀರ್ಷಿಕೆಗಳು ೧೯೮೦ ಏಪ್ರಿಲ್ ಸಂಚಿಕೆಯಲ್ಲಿ ಪ್ರಕಟವಾಗುತ್ತವೆ**







A. L. Syed    A. L. Syed

- ★ ಮೇಲಿನ ಫೋಟೋಗಳಿಗೆ ಸರಿಹೊಂದುವಂತೆ ಒಂದು ವಾಕ್ಯದಲ್ಲಾಗಲೀ, ಸಂಬಂಧಿಸಿದಂತಿರುವ ಎರಡು ವಾಕ್ಯಗಳಲ್ಲಾಗಲೀ ಶೀರ್ಷಿಕೆ ಬರೆಯಬೇಕು.
- ★ ಫೆಬ್ರವರಿ ೧೫ ರೊಳಗೆ ಶೀರ್ಷಿಕೆಗಳು ನಮಗೆ ತಲಪಬೇಕು. ಆಮೇಲೆ ಬಂದ ಶೀರ್ಷಿಕೆಗಳು ಪರಿಶೀಲಿಸಲ್ಪಡುವುದಿಲ್ಲ.
- ★ ನಮಗೆ ಬಂದ ಶೀರ್ಷಿಕೆಗಳಲ್ಲಿ ಅತ್ಯುತ್ತಮವಾದ ಒಂದು ಜತೆಗೆ ರೂಪಾಯಿ ೨೫ ಬಹುಮಾನ.
- ★ ಶೀರ್ಷಿಕೆಗಳನ್ನು ಪೋಸ್ಟುಕಾರ್ಡಿನಲ್ಲೇ ಬರೆಯಬೇಕು. ಅದರಲ್ಲಿ ಬೇರೆ ವಿಷಯ ಬರೆಯಬಾರದು. ವಿಳಾಸ: ಚಂದಮಾಮ ಫೋಟೋ ಶೀರ್ಷಿಕೆಯ ಸ್ಪರ್ಧೆ, ಮದರಾಸು-೬೦೦೦೨೬

---

### ಡಿಸೆಂಬರ್ ಸ್ಪರ್ಧೆಯ ಫಲಿತಾಂಶ:

ಮೊದಲನೇ ಫೋಟೋ: ಮೆತ್ತಗೆ ಹತ್ತು ಎತ್ತಿಕೊಂಡೋಟ ಕಿತ್ತರೆ,

ಎರಡನೇ ಫೋಟೋ: ಮುತ್ತಿನ ಮತ್ತರಿಗೆ ಎತ್ತ ಗೊತ್ತಾಗುತ್ತೆ?

ಕಳುಹಿಸಿದವರು: ಎ. ಕೃಷ್ಣಮೂರ್ತಿರಾವ್,

ಪುನರೂರು, ಕಿನ್ನಿಗೋಳಿ, ದ. ಕ.

**Printed by B. V. REDDI at Prasad Process Private Ltd., and Published by B. VISWANATHA REDDI for CHANDAMAMA CHILDREN'S TRUST FUND (Prop. of Chandamama Publications) 2 & 3, Arcot Road, Madras-600 026 (India). Controlling Editor: NAGI REDDI.**

# ಧುಮುಕುವ ಶಕ್ತಿ

## ಕ್ವಾಲಿಟಿ ಗ್ಲೂಕೋಸ್
## ಚೈತನ್ಯದ ಸವಿ
## ಸುಮಧುರ ಮಾರ್ಗ

ಕ್ವಾಲಿಟಿ ಗ್ಲೂಕೋಸ್ ಬಿಸ್ಕತ್ತುಗಳನ್ನು
ಅತ್ಯಾಧುನಿಕ ವಿಧಾನವನ್ನು ಬಳಸಿ,
ವೈಜ್ಞಾನಿಕವಾಗಿ ತಯಾರಿಸಲಾಗುತ್ತಿದೆ.
ಉತ್ತಮವಾದ ಮಿಶ್ರಣವನ್ನು ಮತ್ತು
ಶ್ರೇಷ್ಠವಾದ ತಾಂತ್ರಿಕ ಜ್ಞಾನವನ್ನು
ಬಳಸಲಾಗುತ್ತಿದೆ.

ಕ್ವಾಲಿಟೀಸ್ ಎಂದರೆ ಉತ್ಕೃಷ್ಟ ಬಿಸ್ಕತ್ತು









ಕ್ವಾಲಿಟಿ ಫುಡ್
ಪ್ರಾಡಕ್ಟ್ಸ್ ಬೆಂಗಳೂರು 560 039

ಗ್ಲೂಕೋಸ್ ಬಿಸ್ಕತ್ತುಗಳಲ್ಲಿ ಅಪರಂಜ

CAS—KFP—7942

CHANDAMAMA (Kannada) FEBRUARY 1980 Regd. No. M. 5210

# ರಾಮು ಮತ್ತು ಶ್ಯಾಮು

## ಅಪಹರಣ!

ಒಂದು ದಿನ ಸಂಜೆ ವಿಹರಿಸುತ್ತಿರಲು ರಾಮುಶ್ಯಾಮರು, ಫಕ್ಕನೆ ಯಾರೋ ಕಿರಿಚಿದ ಶಬ್ದ ಕೇಳಿದರು.













ರಭಸದಿಂದ ಎಸೆದ ಪಾಪಿನ್ಸ್ ತಾಗಿತು ಕಳ್ಳನಿಗೆ,
ಅವನು ತತ್ತರಿಸಿದ, ಪೆಟ್ಟಾಯಿತು ತಲೆಗೆ



ಓಡುತ್ತಿದ್ದ ಕಳ್ಳ ಬಿದ್ದು ಬಿಟ್ಟ ಕೆಳಗೆ, ಕೂಡಲೆ ಓಡಿದ ಪುಟ್ಟು ತನ್ನ ತಾಯಿ ಬಳಿಗೆ.



ಪುನಃ ಎಲ್ಲರಿಗೆ ಆನಂದವುಂಟಾಯಿತು,
ಪ್ರೀತಿ ಪಾಪಿನ್ಸ್‌ನಿಂದ ಕಷ್ಟ ನಿವಾರಣೆಯಾಯಿತು

